

ತೇಲಿಸೊ ಇಲ್ಲ ಮುಳುಗಿಸೊ
ನಿನ್ನ ಕಾಲಿಗೆ ಬಿದ್ದೆನೊ ಪರಮ ಕೃಪಾಳೊ

ಸತಿ ಸುತ ಧನದಾಸೆ ಎಂದೆಂಬ ಮೋಹದಿ
ಹಿತದಿಂದ ಅತಿನೊಂದು ಬೆಂಡಾದೆನೊ
ಗತಿ ಕೊಡುವವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ
ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ –1–

ಜರರೋಗ ದಾರಿದ್ರ್ಯ ಕಶ್ಮಲ ವೆಂತೆಂಬ
ಶರಧಿಯೊಳಗೆ ಬಿದ್ದು ಮುಳುಗಿದೆನೊ
ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ
ಕರುಣಾಭಯವಿತ್ತು ಪಾಲಿಸೊ ಹರಿಯೇ –2–

ದೋಷವುಳ್ಳವ ನಾನು ಭಾಷೆಯುಳ್ಳವ ನೀನು
ಮೋಸ ಹೋದೆನೊ ಭಕ್ತಿರಸವ ಬಿಟ್ಟು,
ಶೇಷಶಯನ ಶ್ರೀ ಪುರಂದರ ವಿಠಲನೆ
ದಾಸರ ಸಂಗವಿತ್ತು ಪಾಲಿಸೋ ಹರಿಯೇ –3–

- ಶ್ರೀ ಪುರಂದರದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು



### ವಾರ್ಷಿಕ ಬ್ರಹ್ಮೋತ್ಸವಗಳು 4-12-88 ರಿಂದ 13-12-88 ವರೆಗೆ

| ದಿನಾಂಕ | ದಿನ | ಬೆಳಗ್ಗೆ | ರಾತ್ರಿ |
|---|---|---|---|
| 4–12–88 | ಭಾನುವಾರ | – — | ಅಂಕುರಾರ್ಪಣೆ |
| 5–12–88 | ಸೋಮವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ |
| 6–12–88 | ಮಂಗಳವಾರ | ಟಾಂಜಾನ್ ಉತ್ಸವ | ಹಂಸವಾಹನ |
| 7–12–88 | ಬುಧವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ |
| 8–12–88 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 9–12–88 | ಶುಕ್ರವಾರ | ಪಲ್ಲಕಿ ಉತ್ಸವ | ಗಜವಾಹನ |
| 10–12–88 | ಶನಿವಾರ | ಹನುಮದ್ವಾಹನ,ಸಂಜೆ–ವಸಂತೋತ್ಸವ | ಗರುಡವಾಹನ |
| 11–12–88 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 12–12–88 | ಸೋಮವಾರ | ರಥೋತ್ಸವ | ಅಶ್ವವಾಹನ |
| 13–12–88 | ಮಂಗಳವಾರ | ಚಕ್ರಸ್ನಾನ | ಧ್ವಜಾವರೋಹಣ. |

ಸೂಚನೆ:– ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಹರಿಕಥೆ ಸಂಗೀತ ಮೊದಲಾದ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡುಗುತ್ತವೆ ತಿರುಚಾನೂರು ತಿರುಪತಿಯಿಂದ ಬಸ್‌ನಲ್ಲಿ ಹತ್ತು ನಿಮಿಷದ ಹಾದಿ. ತಿರುಪತಿಯಿಂದ ನಿರಂತರ ಬಸ್ ವ್ಯವಸ್ಥೆಯಿದೆ. ಹೆಚ್ಚಿನ ವಿವರಗಳಿ ನಿಮ್ಮ ಬಳಿಯ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

**ತಿ.ತಿ.ದೇ**



ಡಿಸೆಂಬರ 1988

ಸಂಪುಟ ೧೯] ನವಂಬರ್ ೧೯೮೮ [ಸಂಚಿಕೆ ೭

# ವಿಷಯಸೂಚಿ



ಮುಖಚಿತ್ರ : ಶ್ರೀ ರಂಗನಾಥಸ್ವಾಮಿ ಹಾಗೂ ಆಂಡಾಳ್ ಚಿತ್ರ–ಕೆ. ಜಗದೀಶ್

ಹಿಂಬದಿಯಲ್ಲಿ: ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯ

ಒಳಗಡೆ : 1. ತಿರುಮಲೆಯಲ್ಲಿ ಮಾರಿಷಸ್ ಗವರ್ನರ್ ಜನರಲ್ ಶ್ರೀ ವೀರಾಸ್ವಾಮಿ ರಿಂಗಡೂ.

2. ತಿರುಪತಿಯಲ್ಲಿ ವನೌಷಧಿ ವಿತರಣಾಯಜ್ಞ ಹಾಗೂ ಮಂಗಳಗಿರಿಯ ತಿ. ತಿ. ದೇ. ಕಲ್ಯಾಣ ಮಂಟಪ ಉದ್ಘಾಟನಾ ದೃಶ್ಯಗಳು.


ಗೌರವ ಸಂಪಾದಕರು :

ಶ್ರೀ ಸಿಎಚ್. ವೆಂಕಟಪತಿರಾಜು ಐ.ಎ.ಎಸ್.

ಸಂಪಾದಕ :

ಶ್ರೀ ಸುಬ್ಬರಾವ್ಪ್ರ, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥

# ಸಂಪಾದಕೀಯ

ನಾಲ್ಕು ದಿನದ ಬದುಕು ನಾಟಕವು
ಜನನವು ನಿಜವು ಮರಣವು ನಿಜವು
ನಟ್ಟ ನಡುವಿನ ಕ್ರಿಯೆಯು ನಾಟಕವು

ಅನ್ನಮಾಚಾರ್ಯರಿಂದ ಈ ತತ್ತ್ವ ಹೇಳಲು ಕೇಳಲು ಚೆನ್ನಾಗಿಯೇ ಇದೆ. ನಟ್ಟನಡುವಿನ ಕೆಲಸ–ಕ್ರಿಯೆ ಮತ್ತೊ ಮೊದಲಲ್ಲೇ ನಿಂತು ಹೋದರೆ, ಕೊರಕಲಿನಲ್ಲಿ ಬಿದ್ದಂತೆ ಜಾರಿಹೋದರೆ, ಅದೂ ತೀರ್ಥಕ್ಷೇತ್ರ ಪರಿಸರದಲ್ಲಿಯಾದರೆ–ಮನುಷ್ಯನ ಮನದಲ್ಲಿ ಮಂಥನ ಅಧಿಕವಾಗಿ ಅವನ ನಂಬಿಕೆಗಳ ಬುಡ ಅಲ್ಲಾಡಿದಂತಾಗುತ್ತದೆ.

ಮೆಟ್ಟಿಲಿಳಿದರೆ ದಡ ಸೇರಿದಂತೆ ಎಂದುಕೊಳ್ಳುವ ಹೊತ್ತಿಗೆ ಮೆಟ್ಟಿಲ ಮೇಲಣ ಹೊಗೆಯಿಂದಾಗಿ ಹತ್ತೊಂಬತ್ತು ಮಂದಿ ಮಸಿಯಾದರು ಎಂದರೆ ಏನೆನ್ನಬೇಕು. ಆಸೆಯ ಅರ್ಥವರಿತವರು, ಆಸೆ ಆಕಾಂಕ್ಷೆಗಳಿಂದಿದ್ದವರು, ಬದುಕಬಲ್ಲವರು, ಬದುಕೇ ತಿಳಿಯದವರು–ಎಲ್ಲ ಸೇರಿ–ಕೂಡಿ–ಕಳೆದು ಹೋದರೆಂದರೆ ಮನಸಿದ್ದವನಿಗೆ ಮಥನ ತಪ್ಪದು.

ಅಂದುಕೊಳ್ಳದ ಅಂದುಕೊಳ್ಳಬಾರದ ಅನ್ಯಾಯ ಉಂಟಾದಾಗ ಅನುತಾಪ, ಆದರಣೆ, ಸಲಹೆ, ಸಹಾಯ, ವಿಚಾರ, ವಿಚಾರಣೆ ಎಲ್ಲ ಸಾಮಾನ್ಯ ಕಾರ್ಯಕ್ರಮ. ಆದರೆ ಗಾಯಗಳಿಗೆ ಮುಲಾಮು ಮಾತ್ರವೇ ಇವು.

ಆದರೆ; ಕಾಲ ಕೂಡಿ ಬಂದಾಗ, ಕಾರಣಗಳನ್ನು ಹುಡುಕಿ, ಮತ್ತೆ ಪುನರಾವರ್ತಿ ಆಗದಂತೆ ನೋಡಿಕೊಳ್ಳುವುದೇ ನಾವು ಮಾಡಬೇಕಾದ ಅನುಸರಿಸಬೇಕಾದ ಪದ್ಧತಿ.

ನಿಜವೆಂದರೆ ಮನುಷ್ಯಜೀವನ ಅನ್ನಮಾಚಾರ್ಯರು ಹೇಳಿದ್ದಕ್ಕಿಂತ ಹೆಚ್ಚು ಅನ್ಯಾಯವಾಗಿ ಕಂಡುಬರುತ್ತಿದೆ. ಹೊಸಿಲು ದಾಟಿದರೆ, ಹಿಂದಿರುಗಿ ಬರುವುದೋ ಬಾರದಿರುವುದೋ ತಿಳಿಯದ ಭಯಾನಕ ಪರಿಸ್ಥಿತಿ ಬಸ್ ಏರ ಬಯಸುವವರಿಗೆಲ್ಲ ಎದುರಾಗುತ್ತಿದೆ. ದಾರಿ ದರೋಡೆಗಳೊಡನೆ, ಸ್ಫೋಟಗಳ ಸಂಘಟನೆಗಳೂ ಚರಿತ್ರೆಯಾಗುತ್ತಿದೆಯೆಂದರೆ ನಮ್ಮ ಪದ್ಧತಿಗಳನ್ನು ಪರಿಶೀಲಿಸಿಕೊಂಡು ಪಟಿಷ್ಠಗೊಳ್ಳಿಸಿಕೊಳ್ಳುವ ಅಗತ್ಯ ಕಂಡುಬರುತ್ತಿದೆ.

ಎಲ್ಲ ಸರಿಯಾಗಿದ್ದಾಗ ಯಾರೂ ಏನೂ ಅಂದುಕೊಳ್ಳದಿದ್ದರೂ, ವಾಸ್ತವದಲ್ಲಿ ಬಸ್ ವ್ಯವಸ್ಥೆಯಲ್ಲೇ ಕೆಲವು ಮಾರ್ಪಾಡುಗಳ ಅಗತ್ಯವಿದೆ

ಬಸ್‌ಗಳ ನಿರ್ಮಾಣದಲ್ಲಿ ಪ್ರತ್ಯೇಕವಾದ ಅತ್ಯಯಿಕ ದ್ವಾರ (ಎಮರ್ಜೆನ್ಸಿ ಎಕ್ಸಿಟ್) ಸಾಕಷ್ಟು ದೊಡ್ಡದಾಗಿ, ವಿಶಾಲವಾಗಿ, ಎಲ್ಲರಿಗೂ ಕಾಣುವಂತೆ, ಬೇಗನೆ ತೆಗೆದುಕೊಳ್ಳುವಂತೆ ಇದ್ದರೆ ಪ್ರಾಣರಕ್ಷಣೆ ಹೆಚ್ಚಿಗೆ ಆಗಲು ನೆರವಾಗುತ್ತದೆ. ನಿರ್ವಾಹಕ (ಕಂಡಕ್ಟರ್) ಕುಳಿತುಕೊಳ್ಳುವ ಸೀಟ್ ಎಲ್ಲರಂತೆ ಇರದೆ ಎಲ್ಲರನ್ನೂ ನೋಡುವಂತೆ ಚಾಲಕರ ಪಕ್ಕದಲ್ಲಿ ತಿರುಗು ಚಕ್ರ ಹೊಂದಿದ್ದಲ್ಲಿ ಬಸ್ ಹತ್ತಿ ಇಳಿಯುವವರ ಆಕಾರ ವ್ಯವಹಾರಗಳನ್ನು ಗಮನಿಸಲು ಸಹಾಯಕವಾಗುತ್ತದೆ.

ಮಾರಣಾಯುಧಗಳು, ವಿಶೇಷ ರಾಸಾಯನಿಕ ವಸ್ತುಗಳನ್ನು ಬಸ್ಸಿಗೆ ತಂದರೆ ತಿಳಿಸುವ ಯಂತ್ರಗಳನ್ನು ಕನಿಷ್ಠ ಕಾಡುಹಾದಿಯ. ಕತ್ತಲು ರಾತ್ರಿಯ ಪ್ರಯಾಣದ ಬಸ್‌ಗಳಲ್ಲಾದರೂ ಏರ್ಪಡಿಸಬೇಕು.

ಬಸ್ ಪ್ರಯಾಣ ಅಂದುಕೊಂಡಷ್ಟು ಅನುಕೂಲವೇನಲ್ಲ ಎಂದು ತಿಳಿಯುತ್ತಿದೆ. ನಿಜವೆಂದರೆ ನಡಿಗೆಯ ಹೊರತು ಮಿಕ್ಕೆಲ್ಲವುಗಳ ನಡತೆಯೂ ಅಷ್ಟೆ. ಹಾಗಾಗಿ ನಡಾವಳಿಯಲ್ಲಿರುವ ಪ್ರತಿಯೊಂದರಲ್ಲೂ ಅಂಟಿಕೊಂಡದ್ದನ್ನು ಆರಿಸಲೂ, ಬಾಯಾರಿಕೆಯನ್ನು ತೀರಿಸಲೂ ವಿಧಿವತ್ತಾದ ಅನುಕೂಲಗಳ ಏರ್ಪಾಡಾಗಬೇಕು.

ಅಪಾಯಕ್ಕೆ ಆಕಾರವಿಲ್ಲ. ಅದು ಹೇಳಿಯೂ ಬರದು. ಆಪತ್ತಿಗೆ ಒಳಗಾದವರ ಅನುಕೂಲಗಳನ್ನು ಗಮನಿಸಲು ಕೆಲವು ಮುಖ್ಯಕೇಂದ್ರಗಳಲ್ಲಾದರೂ ಕಾರ್ಯಾಲಯದ ಹತ್ತಿರವೇ ವೈದ್ಯ ಸೌಕರ್ಯವಿದ್ದರೆ ಉತ್ತಮ.

ಪ್ರಯಾಣದಲ್ಲಿ ಪರಿತೋಷವೇ ಅಲ್ಲ-ಪರಿತಾಪಗಳೂ ಉಂಟು. ಇವುಗಳನ್ನೆದುರಿಸಲು ಅವಸರಕ್ಕೆ ತಕ್ಕ ಔಷಧಿ ಅಂಗಡಿಗಳೂ ಪ್ರತಿ ಬಸ್ ನಿಲ್ದಾಣದಲ್ಲೂ ಇರಬೇಕು. ರಾತ್ರಿ ಪ್ರಯಾಣದ ಬಸ್‌ಗಳಲ್ಲಿಯಾದರೂ ಮಾರ್ಗಮಧ್ಯದ ವಿಚಾರ ವಿನಿಮಯಕ್ಕಾಗಿ ವಾಕಿ ಟಾಕಿ ಇರಬೇಕು ಎಂಬುದನ್ನು ಆಲೋಚಿಸಬೇಕು.

ಇಷ್ಟೂ ಹೇಳುವುದೆಂದರೆ ಕೆಲಸದ ರೀತಿಯನ್ನು ಟೀಕಿಸುವುದಲ್ಲ. ಹೆಚ್ಚುತ್ತಿರುವ ಅಗತ್ಯ ಆಪತ್ತುಗಳ ಹಿನ್ನೆಲೆಯಲ್ಲಿ ಆಲೋಚಿಸತಕ್ಕ ಅಂಶಗಳು. ಒಳ್ಳೆಯದಕ್ಕೇ ಎಂದಾಗ ಔಷಧಿ ಕಹಿಯಾದರೂ ತಪ್ಪದು.

ಅಪಘಾತಕ್ಕೆ ಗುರಿಯಾದ ಕುಟುಂಬಗಳಿಗೆ ಪ್ರಗಾಢ ಸಂತಾಪ ಸೂಚಿಸುತ್ತ ಸ್ವರ್ಗಸ್ಥರಾದವರ ಆತ್ಮಗಳಿಗೆ ಪ್ರಶಾಂತಿಯನ್ನು ನೀಡಬೇಕೆಂದು ಶ್ರೀ ವೆಂಕಟೇಶ್ವರನಲ್ಲಿ ಪ್ರಾರ್ಥಿಸುವ.

# ಇತಿಹಾಸದಲ್ಲಿ ಕುರುಕ್ಷೇತ್ರ

ದಿಲ್ಲಿಯಿಂದ ಉತ್ತರದ ಕಡೆಗೆ 160 ಕಿ.ಮೀ. ದೂರದಲ್ಲಿ ಹರಿಯಾಣಾದ ಕರ್ನಾಲ್ ಜಿಲ್ಲೆಯಲ್ಲಿ ಕುರುಕ್ಷೇತ್ರ ನಗರವಿದೆ. ಇದೊಂದು ಪ್ರಮುಖ ರೈಲ್ವೆ ಜಂಕ್ಷನ್ ಆಗಿದ್ದು ಉತ್ತರದ ಕಡೆಗೆ ಚಂಡೀಗಢಕ್ಕೂ ಪಶ್ಚಿಮದ ಕಡೆ ನರ್ವಾನಾ ಕಡೆಗೂ ರೈಲುಮಾರ್ಗವಿದೆ.

ಇದು 96 ಕಿ.ಮೀ. ಉದ್ದವಿದ್ದು, 48 ಕಿ.ಮೀ. ಗಳಷ್ಟು ಅಗಲವಿದ್ದು. 4600 (2100 ಚ.ಮೈ.) ಕಿ.ಮೀ ಗಳಷ್ಟು ವಿಸ್ತಾರವಾದ ಪ್ರದೇಶವಾಗಿದೆ ಇದೊಂದು ಪುಣ್ಯತಮ ಪ್ರದೇಶ ಎಂದು ಹೆಸರು ಪಡೆದಿದೆ.

ಚಂದ್ರವಂಶದ ಸಂವರಣ ರಾಜನ ಮಗನಾದ ಕುರುಚಕ್ರವರ್ತಿಯು ಯಾಗಶಾಲೆಗಾಗಿ ನಿರ್ಮಿಸಿದ ಪ್ರದೇಶವಾಗಿದ್ದು, ಆ ಸಮಯದಲ್ಲಿ ನಿರ್ಮಾಣವಾದ ನಗರವೇ 'ಕುರುವಿನ ಕ್ಷೇತ್ರ–ಕುರುಕ್ಷೇತ್ರ' ವಾಗಿದೆ ಇದು ಸರಸ್ವತಿ ಹಾಗೂ ದೃಷದ್ವತೀ ನದಿಗಳ ನಡುವಿನ ಪ್ರದೇಶವಾಗಿದೆ

ತರಂತುಕಾರಂತುಕಯೋರ್ಯದಂತರಂ ।
ರಾಮಹ್ರದಾನಾಂ ಚ ಮಚಕ್ರುಕಸ್ಯ ॥
ಏತತ್ ಕುರುಕ್ಷೇತ್ರ ಸಮಂತ ಪಂಚಕಂ ।
ಪ್ರಜಾಪತೇರುತ್ತರವೇದಿರುಚ್ಯತೇ ॥
[ಭಾರತ ಶಲ್ಯಪರ್ವ 53]

ಎನ್ನುವ ಶ್ಲೋಕಾನುಸಾರ ಈಗಿನ (ಕೌರವ ಪಾಂಡವರ ಯುದ್ಧರಂಗವೆಂಬುದಾಗಿ ಪ್ರಖ್ಯಾತಿಗೊಂಡಿರುವ) ಕುರುಕ್ಷೇತ್ರವು ತರಂತುಕ, ಅರಂತುಕ, ರಾಮಹ್ರದ (ಪರಶುರಾಮನು ಕ್ಷತ್ರಿಯರನ್ನು ಕೊಂದು ಅವರ ರಕ್ತದಿಂದ ಏರ್ಪಟ್ಟ ಮಡುಗಳು), ಮಚಕ್ರುಕ ಎನ್ನುವ ನಾಲ್ಕು ಗಡಿಗಳ ನಡುವಣ ಭಾಗವೇ ಭಾರತ ಯುದ್ಧದ ರಣಭೂಮಿಯಾಗಿತೆಂದು ಹೇಳಲಾಗುತ್ತದೆ

ಪರಶುರಾಮನು 21 ಬಾರಿ ಕ್ಷತ್ರಿಯರನ್ನು ಸದೆಬಡಿದು ಅವರ ರಕ್ತದಿಂದ 21 ಮಡುಗಳನ್ನು ನಿರ್ಮಿಸಿದುದು ಇಲ್ಲಿಯೇ ಎಂದು ಹೇಳಲಾಗುತ್ತದೆ.

ಈ ಕುರುಕ್ಷೇತ್ರಕ್ಕೆ ಬ್ರಹ್ಮನ ಉತ್ತರವೇದಿ, ಅಂತರ್ವೇದಿ, ವಿಶಸನ ಕ್ಷೇತ್ರ, ಸ್ಯಮಂತಪಂಚಕಗಳೆಂಬ ನಾಮಾಂತರಗಳಿವೆ. ಹಿಂದೆ ಚತುರ್ಮುಖ ಬ್ರಹ್ಮನು ಈ ಪ್ರದೇಶದಲ್ಲಿ ಅನೇಕ ಯಜ್ಞಗಳನ್ನು ಮಾಡಿದ. ಈಗಲೂ ಈ ಪ್ರದೇಶದ ಸುತ್ತಲೂ ಪೌಳಿಯನ್ನು ಏರ್ಪಡಿಸಿರುತ್ತಾರೆ. ಆದರಿಂದಲೇ ಈ ಪ್ರದೇಶವನ್ನು ಬ್ರಹ್ಮಾವರ್ತ ಎಂದು ಕರೆಯುತ್ತಾರೆ ಈ ನಗರದ ಹೆಸರು ವೇದಗಳಲ್ಲಿ, ತೈತ್ತರೀಯ ಆರಣ್ಯಕ, ಶತಪಥ ಹಾಗೂ ಐತ್ತರೇಯ ಬ್ರಾಹ್ಮಣಗಳಲ್ಲಿ, ಜಾಬಾಲಿ ಉಪನಿಷತ್ತು ಇತ್ಯಾದಿಗಳಲ್ಲಿ ಕಂಡು ಬರುತ್ತದೆ.

ದ್ವಾಪರಯುಗದಲ್ಲಿ ಇದೊಂದು ಪವಿತ್ರ ಕ್ಷೇತ್ರವೆನಿಸಿ [illegible] ಇಲ್ಲದೆ ನಾವು ಈ ಪುರಾಣದಲ್ಲಿಯೂ ಇದರ ವಿಸ್ತೃತವಾಗಿ ಈ ನಗರದ ವಿವರಗಳಿರುವುದೇ ಅಲ್ಲದೆ ಇದರ ಎಲ್ಲೆಗಳ ಬಗ್ಗೆ ತಿಳಿಸಿ, ಕುರುಕ್ಷೇತ್ರವನ್ನು ರಕ್ಷಿಸುವ ಯಕ್ಷರ ಬಗ್ಗೆಯೂ ತಿಳಿಸುತ್ತವೆ.

ಚಂಡೀಗಢ ಅಥವಾ ಸಿಮ್ಲಾಕ್ಕೆ ಹೋಗುವ ಪ್ರಯಾಣ ಪ್ರವಾಸಿಗಳಿಗೆ ಇದೇನೂ ಅಂತಹ ಆಕರ್ಷಕ ನಗರವಾಗಿರುವುದಿಲ್ಲ ಏಕೆಂದರೆ ಇಲ್ಲಿ ಊಟ, ತಿಂಡಿಗಳ ಹಾಗೂ ಇಳಿದುಕೊಳ್ಳುವ (ವಸತಿ) ವ್ಯವಸ್ಥೆ ಬಹಳ ಕಡಿಮೆ ಇದೆ

ಆದರೆ ಹಿಂದಲ್ಲಿ ಈ ನಗರವು ತನ್ನದೇ ಆದ ಇತಿಹಾಸವನ್ನು ನಿರ್ಮಿಸಿದ್ದು, ಅನೇಕ ಚಕ್ರಾಧಿಪತ್ಯಗಳ ಏಳು, ಬೀಳುಗಳನ್ನು ಕಂಡಿದೆ.

ಉತ್ತರಭಾರತ ಹಾಗೂ ಪಂಜಾಬ್, ಗಾಂಧಾರಗಳನ್ನು ಒಂದುಗೂಡಿಸುವ ಅತ್ಯಂತ ಪ್ರಾಚೀನ ವಾಣಿಜ್ಯ ಮಾರ್ಗದಲ್ಲಿದೆ. ಆದರೆ ಇದೇ ವಾಣಿಜ್ಯಮಾರ್ಗವೇ ನಿರಂತರ ಮುಸ್ಲಿಂ ಧಾಳಿಕಾರರನ್ನು ಆಕರ್ಷಿಸಿ, ಆಹ್ವಾನಿಸಿ, ಇಲ್ಲಿನ ಬಹಳಷ್ಟು ಸಾಂಸ್ಕೃತಿಕ ಪ್ರಾತಿನಿಧಿತ್ವವನ್ನು ಧ್ವಂಸಮಾಡಲು ಸಹಾಯಕವಾಯಿತು.

ಗುರುಗಳ, ಸಿಖ್ಖರ ಹಾಗೂ ಮರಾಠರ ಶಕ್ತಿಯುಳಗಿನ ಪ್ರಭಾವವನ್ನೂ ಈ ಕ್ಷೇತ್ರವು ಪಡೆಯಿತು. ಈ ನಗರದ ಸಾಮಾಜಿಕ ಹಾಗೂ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದ ಮೇಲೆ ಇವರುಗಳು ತಮ್ಮದೇ ಆದ ಪ್ರಭಾವವನ್ನು ಬೀರಿದ್ದಾರೆ

ಸ್ವಾತಂತ್ರ್ಯಾನಂತರ ಈ ಪ್ರದೇಶಕ್ಕೆ ಹೊಸ ರೂಪವನ್ನು ನೀಡುವ ಪ್ರಯತ್ನಗಳು ನಡೆದಿವೆ. ಕುರುಕ್ಷೇತ್ರವನ್ನು ಕೇಂದ್ರವನ್ನಾಗಿಯುಳ್ಳ ಒಂದು ಬೇರೆಯೇ ಆದ ಜಿಲ್ಲೆಯ ನಿರ್ಮಾಣ ಮತ್ತು ಕುರುಕ್ಷೇತ್ರ ವಿಶ್ವವಿದ್ಯಾನಿಲಯದ ಸ್ಥಾಪನೆ. ಇವೆರಡು ಇಲ್ಲದಿದ್ದಲ್ಲಿ ಈ ಕ್ಷೇತ್ರವು ಎಚ್ಚರಗೊಳ್ಳುತ್ತಲೇ ಇರಲಿಲ್ಲ. ಹಾಗೆ ಎದ್ದೇಳುವ ಸಂದರ್ಭಗಳೆಂದರೆ ಬೇರೆ ಬೇರೆಯಾದ 'ಮೇಲಾ' ಗಳು. ಮೇಲಾಗಳು ಎನ್ನುವ ಈ ಜಾತ್ರೆಗಳು ನಡೆಯುವ ಸಮಯದಲ್ಲಿ ಸಾವಿರಾರು ಯಾತ್ರಿಕರು ಇಲ್ಲಿಗೆ ಬರುವರು.

**ರಘುಸುತ**

ಇಂದಿಗೂ ಕುರುಕ್ಷೇತ್ರದಲ್ಲಿ ಸಾಮಾನ್ಯ ಪ್ರಯಾಣಿಕರಿಗೆ ಹಾಗೂ ಅಂತರಿಕ ಪ್ರವಾಸಿಗಳಿಗೆ ಸಾಕಷ್ಟು, ಅನುಕೂಲಕರ ವಸತಿ ಸೌಕರ್ಯಗಳಿಲ್ಲದಿರುವುದೊಂದು ವಿಚಿತ್ರ ಸನ್ನಿವೇಶ

ಕ್ರಿ.ಶ 7 ನೇ ಶತಮಾನದಿಂದೀಚೆಗೆ ಕುರುಕ್ಷೇತ್ರದ ಬಗ್ಗೆ ನಿರಂತರ ಆಧಾರಯುಕ್ತ ಐತಿಹಾಸಿಕ ದಾಖಲೆಗಳು ದೊರೆಯುತ್ತವೆ ಡಾ. ಬಿ.ಸಿ. ಲಾಲ್ ರವರು ತಮ್ಮ 'ಜಿಯಾಗ್ರಫಿ ಆಫ್ ಬುದ್ಧಿಸಂ' ಎನ್ನುವ ಪುಸ್ತಕದಲ್ಲಿ ಸೂಚಿಸಿರುವಂತೆ ಈ ಕುರುಕ್ಷೇತ್ರವೇ, ಥಾನೇಶ್ವರ ಎಂದು ಗುರ್ತಿಸಲಾಗಿದೆ. ಮೊದಲು ಇದು ಪುಷ್ಪಭೂತಿಯ ರಾಜಧಾನಿಯಾಗಿದ್ದು ನಂತರ ಚಕ್ರವರ್ತಿ ಹರ್ಷವರ್ಧನನ ರಾಜಧಾನಿಯಾಗಿತ್ತು.

ಮೂರು ಬೌದ್ಧ ಚೈತ್ಯಾಲಯಗಳು ಹಾಗೂ ಒಂದು ಅಶೋಕ ಸ್ತೂಪವನ್ನು ಈ ಪ್ರದೇಶದಲ್ಲಿ ತಾನೂ ಕಂಡುದುದಾಗಿ ಹ್ಯೂಯೆನ್ ತ್ಸಾಂಗನು ತಿಳಿಸಿದ್ದಾನೆ. ಎಸ್.ಬಿ. ಬಿಯಲ್ ರವರು ಇವುಗಳನ್ನು ಗುರ್ತಿಸಿರುವುದೇ ಅಲ್ಲದೆ ಬೌದ್ಧ ಸ್ತೂಪಕ್ಕಾಗಿ ಉತ್ಖನನ ಮಾಡುವ ಪ್ರಯತ್ನಗಳನ್ನು ಮಾಡಿದ್ದಾರೆ.

ಇಲ್ಲಿ ದೊರೆತಿರುವ ಇತರೇ ಅವಶೇಷಗಳು ಹಾಗೂ ಸಾಹಿತ್ಯಕ ಪರಾಮರ್ಶೆಗಳ ಆಧಾರದ ಮೇಲೆ ಈ ಪ್ರದೇಶದಲ್ಲಿ ಭಗವಾನ್ ಸೂರ್ಯ, ವಿಷ್ಣು, ಶಿವ ಹಾಗೂ ಪಾರ್ವತಿಯರ ಪೂಜೆಗಳು ಜೊತೆ ಜೊತೆಯಾಗಿಯೇ ನಡೆಯುತ್ತಿದ್ದುವೆಂದು ಹೇಳಲಾಗುತ್ತದೆ

ಕ್ರಿ.ಶ. 7 ನೇ ಶತಮಾನದ ಪ್ರಾರಂಭದಲ್ಲಿ ಕುರುಕ್ಷೇತ್ರವು ಥಾನೇಶ್ವರವಾಗಿ ವೈಭವದ ತುತ್ತತುದಿಯನ್ನು ಮುಟ್ಟಿತ್ತು. ಹರ್ಷನ ನಂತರ ಈ ಪ್ರದೇಶವು ತನ್ನ ಹಿಂದಿನ ವೈಭವವನ್ನು ಕಳೆದುಕೊಂಡಿತು. ಕ್ರಿ.ಶ. 9–10 ನೇ ಶತಮಾನಗಳಲ್ಲಿ ಗೂರ್ಜರ–ಪ್ರತೀಹಾರರ ಪ್ರದೇಶದಲ್ಲಿ ಒಂದಾಗಿದ್ದ ಈ ನಗರದ ಮೇಲೆ ಘಜ್ನಿ ಮೊಹಮ್ಮದ (ಕ್ರಿ.ಶ 1041) ನ ಕಾಲದಿಂದ ಪ್ರಾರಂಭವಾದ ಧಾಳಿಗಳು, ಕದನಗಳು, ಲೂಟಿಗಳು ಸಿಕಂದರ್ ಲೋದಿ ಮತ್ತಿತರರ ಕಾಲದವರೆಗೂ ಮುಂದುವರೆಯಿತು.

ಔರಂಗಜೇಬನಿಂದಾಗಿ ಕುರುಕ್ಷೇತ್ರದ ಎಲ್ಲ ದೇವಾಲಯಗಳೂ ನೆಲಸಮವಾದವು ಹಿಂದೂ

ಸಂಪ್ರದಾಯ ಹಾಗೂ ಪರಂಪರೆಯು ಕ್ಷೀಣವಾಗ ತೊಡಗಿತು. ಇಲ್ಲಿನ ಪವಿತ್ರ ತೀರ್ಥಗಳು ಹಾಗೂ ಕ್ಷೇತ್ರಗಳನ್ನು ದರ್ಶಿಸುವವರು ಶುಭದಿನ ಹಾಗೂ ಹಬ್ಬ ಹರಿದಿನಗಳಲ್ಲೂ ಕೂಡ ಬೆರಳೆಣಿಸುವಷ್ಟಕ್ಕೆ ಇಳಿದರು.

ಹಿಂದೂಧರ್ಮ ಅಭಿವೃದ್ಧಿ ಸಂಸ್ಥೆಗಳು ಹಾಗೂ ಇತರೇ ಧಾರ್ಮಿಕ ಸಂಸ್ಥೆಗಳು ಈಗ ಕುರುಕ್ಷೇತ್ರವನ್ನು ಪುನರುದ್ಧಾರಗೊಳಿಸುವ ಪ್ರಯತ್ನಗಳನ್ನು ಮಾಡುತ್ತಿವೆ. ಪ್ರಾಚೀನ ಅವಶೇಷಗಳ ಮೇಲೆ ಆಧುನಿಕ ಹಿಂದೂ ದೇವಾಲಯಗಳು ನಿರ್ಮಾಣವಾಗುತ್ತಿವೆ. ಇವುಗಳೊಂದಿಗೆ ಒಂದೆರಡು ಗುರುದ್ವಾರಗಳ ನಿರ್ಮಾಣವೂ ಆಗುತ್ತಿದೆ.

ಸಿಖ್ ಧರ್ಮದ ಸ್ಥಾಪಕರಾದ ಗುರು ನಾನಕ್ ರವರು ಕ್ರಿ. ಶ. 1304 ರಲ್ಲಿನ ಸೂರ್ಯಗ್ರಹಣದಂದು ಕುರುಕ್ಷೇತ್ರವನ್ನು ಸಂದರ್ಶಿಸಿದರು. ನಂತರದಲ್ಲಿ ಇತರೇ ಸಿಖ್ ಗುರುಗಳೂ ಈ ಪ್ರದೇಶವನ್ನು ಸಂದರ್ಶಿಸಿದ್ದರ ಪರಿಣಾಮವಾಗಿ ಕೆಲವೊಂದು ಸಿಖ್ ಗುರುದ್ವಾರಗಳು ತಲೆಯೆತ್ತಿ ನಿಂತಿವೆ.

ಇದರ ಪರಿಣಾಮವಾಗಿ ಕುರುಕ್ಷೇತ್ರವು ಇಂದು ಸಿಖ್ಖರ ನಿರ್ಮಲ ಪಂಥದ ಕೇಂದ್ರಸ್ಥಾನವಾಗಿ ಪರಿವರ್ತನೆಗೊಂಡಿದೆ. ಹಿಂದೂ ಹಾಗೂ ಸಿಖ್ ಪೂಜಾಸ್ಥಾನಗಳೊಂದಿಗೆ ಶೇಕ್ ಚೆಲ್ಲಿಯ ಮಖ್‌ಬರಾ ಮತ್ತು ಶೇರ್‌ಷಾಹ್ ಸೆರಾಯ್‌ಗಳಿವೆ.

ಹಜರತ್ ಶೇಕ್ ಚೆಲ್ಲಿರವರ ಗೋರಿ ಹಾಗೂ ಶೇರ್‌ಷಾಹ್‌ನ ಸರಾಯ್‌ಗಳು ಸಾರಸೆನಿಕ್ ವಾಸ್ತುಶಿಲ್ಪದ ಸುಂದರ ಸ್ಮಾರಕಗಳಾಗಿದ್ದು ಹಿಂದೂ, ಸಿಖ್, ಇಸ್ಲಾಂಧರ್ಮದ ಸಹಬಾಳ್ವೆಯ ಪ್ರಶಾಂತತೆಯನ್ನು ಎತ್ತಿ ತೋರಿಸುತ್ತವೆ. ಶೇರ್ ಷಹನು ಈ ಪ್ರದೇಶಕ್ಕೆ ಸೂಕ್ತ ಆಡಳಿತ, ರಸ್ತೆಗಳು ಹಾಗೂ ಕಂದಾಯ ಸಂಗ್ರಹ ಅಭಿವೃದ್ಧಿ ಇತ್ಯಾದಿ ಅನೇಕ ಸಾಧಾರಣೆಗಳನ್ನು ತಂದನು.

ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಭಾರತಾದ್ಯಂತ ಹರಡಿರುವ ನೂರಾರು ತೀರ್ಥಕ್ಷೇತ್ರಗಳಲ್ಲಿ ಕುರುಕ್ಷೇತ್ರವು ಅತ್ಯಂತ ಪವಿತ್ರತಮ ತೀರ್ಥವೆಂದು ಡಾ॥ ಆರ್. ಸಿ ಮಜುಂದಾರ್ ರವರು ನಿರ್ಧರಿಸಿದ್ದಾರೆ. ಇಲ್ಲಿ ಇಂದಿಗೂ ಬಹಳ ಪ್ರಮುಖವೂ, ಆಕರ್ಷಕವೂ ಆದ ಅನೇಕ ಸ್ಥಳಗಳಿವೆ. ಇವುಗಳಲ್ಲಿ ಮುಖ್ಯವಾದವು ಮಹದೇವ ದೇವಾಲಯ, ಲಕ್ಷ್ಮೀನಾರಾಯಣ ದೇವಾಲಯ, ಶ್ರೀ ಭಗವದ್ಗೀತಾ (ಬಿರ್ಲಾ) ದೇವಾಲಯ, ಗೀತಾಭವನ್, ಹವೇಲಿ ಶ್ರವಣ ಮಠ, ಜ್ಯೋತಿಸಾರ ತೀರ್ಥ–ಇವು ಮುಖ್ಯವಾದವು. ಪ್ರತಿವರ್ಷ ಇವು ಸಾವಿರಾರು ಯಾತ್ರಿಕರನ್ನು ಆಕರ್ಷಿಸುತ್ತಿದೆ. ಇವುಗಳಲ್ಲಿ ಕೆಲವು ಪ್ರಾಚೀನ ಅವಶೇಷಗಳ ಮೇಲೆ ನಿರ್ಮಾಣವಾಗಿರುವ ದೇವಾಲಯಗಳಾಗಿವೆ. ಕೊನೆಯ ಗುರುಗಳಾದ ಗೋವಿಂದ ಸಿಂಗ್ ರವರ (1665-1708) ಕುರುಕ್ಷೇತ್ರಕ್ಕೆ ಭೇಟಿ ನೀಡಿದ ಸವಿನೆನಪಿಗಾಗಿ ಗುರುದ್ವಾರ ದಾಸ್ವಿನ್ ಪಟ್ಶಾಹಿಯನ್ನು ನಿರ್ಮಿಸಲಾಗಿದೆ. ಸಿಖ್ಖರ ನಿರ್ಮಲ್ ಪಂಥದವರು ಇಲ್ಲಿ ಅನೇಕ ಆಶ್ರಮಗಳನ್ನು ಹೊಂದಿದ್ದಾರೆ.

ಮಹಾಭಾರತ ಹಾಗೂ ವಾಮನ ಪುರಾಣದ ವಿವರಗಳಿಗೆ ಅನುಸಾರವಾಗಿ ಕುರುಕ್ಷೇತ್ರದಲ್ಲಿ ಹಿಂದೂಗಳಿಗೆ ಪವಿತ್ರವಾದ 360 ಕ್ಕೂ ಹೆಚ್ಚು ತೀರ್ಥಗಳಿವೆ. ಇವುಗಳಲ್ಲಿ ಅನೇಕವುಗಳನ್ನು ಈಗ ಗುರುತಿಸಲಾಗಿದೆ.

ಇವುಗಳಲ್ಲಿ ಬಹಳ ಮುಖ್ಯವಾದುದು ಬ್ರಹ್ಮಸಾರಕೊಳ ಎಂದು ಕರೆಯಲ್ಪಡುವ ‘ಕುರುಕ್ಷೇತ್ರ ತೀರ್ಥ’ ಎನ್ನುವುದು. ಮಹಾಭಾರತದ ಯುದ್ಧ ನಡೆಯುವುದಕ್ಕೆ ಬಹಳ ಮುಂಚೆಯೇ ಕುರು ಮಹಾರಾಜನು ಈ ಕೊಳವನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ.

(36 ನೇ ಪುಟ ನೋಡಿ)

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಿಮೆಯವರಲ್ಲದ ಸ್ಥಳೀಯ ದೇವಾಲಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ [illegible]0% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

# ಭಗವದ್ಗೀತೆಯಲ್ಲಿ ಸತ್ತ್ವರಜಸ್ತಮೋಗುಣಗಳು

ಯುಗಧರ್ಮಗಳನ್ನನುಸರಿಸಿ ಸತ್ತ್ವಧರ್ಮಗಳ ಆಚರಣೆಯು ಸ್ವಲ್ಪ ಸ್ವಲ್ಪವಾಗಿ ಹೀನಸ್ಥಿತಿಗೆ ಇಳಿಯುತ್ತಿರುವುದನ್ನು ಪುರಾಣೇತಿಹಾಸಗಳಿಂದ ಓದಿ ತಿಳಿದಿರುವೆವು. ಇದಕ್ಕೆ ಮಾನವರ ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುವ ಸತ್ತ್ವ ರಜಸ್ತಮೋಗುಣಗಳ ವ್ಯತ್ಯಾಸಗಳೇ ಕಾರಣ. ಶಾಸ್ತ್ರಗಳಲ್ಲಿ ವಿವರಿಸಿರುವ ಈ ಸತ್ತ್ವಧರ್ಮಗಳ ಸತತ್ತ್ವಾರ್ಥವು ಶುದ್ಧ ಸತ್ತ್ವಮಯರಾದ ವ್ಯಾಸಾದಿ ಮಹರ್ಷಿಯರಿಗೇ ಭಗವದನುಗ್ರಹದ ಫಲವಾಗಿ ಪ್ರಕಾಶಿಸುವುದಲ್ಲದೆ ಇತರರಿಗೆ ವಿಶದವಾಗಿ ಪ್ರಕಾಶಿಸುವುದಿಲ್ಲವೆಂದು ಹೇಳುವುದು. ಕೃತಯುಗದಲ್ಲಿ ಪ್ರಾಬಲ್ಯದಲ್ಲಿರುವಷ್ಟು ಸತ್ತ್ವಗುಣವು ತ್ರೇತಾಯುಗದಲ್ಲಿರುವುದಿಲ್ಲ. ದ್ವಾಪರಯುಗದಲ್ಲಿ ರಜಸ್ತಮೋಗುಣಗಳ ಪ್ರಾಬಲ್ಯವು ಜಾಸ್ತಿಯಾಗಿರುವುದು. ಕಲಿಯುಗದಲ್ಲಂತೂ ಸತ್ತ್ವಗುಣವು ಬಹಳವಾಗಿ ಕ್ಷೀಣಿಸಿ, ರಜೋಗುಣ ತಮೋಗುಣಗಳ ಪ್ರಾಬಲ್ಯವು ಬಹಳ ಜಾಸ್ತಿಯಾಗಿರುವುದು. ಆದರಿಂದ ಈ ಯುಗಧರ್ಮಗಳ ಬದಲಾವಣೆಗೆ ಮಾನವನಲ್ಲಿರುವ ಪ್ರಕೃತಿಯು ತ್ರಿಗುಣಗಳ ವ್ಯತ್ಯಾಸಗಳೇ ಕಾರಣವಾಗಿರುವುದು ವಿದಿತವು. ಈ ರಜೋಗುಣತಮೋಗುಣಗಳ ಪ್ರಾಬಲ್ಯಕ್ಕನುಗುಣವಾಗಿ ಧರ್ಮಗ್ಲಾನಿಯೇರ್ಪಡುವುದು. ಆದರ ಫಲವಾಗಿ ಜನರಲ್ಲಿ ಸ್ವಾರ್ಥತೆಯು ಅಧಿಕವಾಗುತ್ತಾ ಮಾನವತ್ವಗುಣವು ಕ್ಷೀಣಿಸಿ ದಾನವತ್ವವು ತಲೆಯೆತ್ತಿ ಮೆರೆಯುವುದು. ಈ ತ್ರಿಗುಣಗಳ ವಿಚಾರವನ್ನು ಬೇರೆ ಯಾವ ಶಾಸ್ತ್ರಗ್ರಂಥದಲ್ಲೂ ದೊರಕದಷ್ಟು ವಿಸ್ತಾರವಾಗಿ ಭಗವದ್ಗೀತೆಯಲ್ಲಿ ವಿವರಿಸಿರುವುದು.

## ಶಾಸ್ತ್ರಜ್ಞಾನದ ಅಭಾವ

ಈಗ ವೇದ ವೇದಾಂತಾದಿ ಶಾಸ್ತ್ರಗಳ ಜ್ಞಾನ ಮತ್ತು ಅವುಗಳ ಆಚರಣೆ ಇವೆಲ್ಲಾ ಇಳಿಮುಖವಾಗಿವೆ. ಜನಗಳ ನಡತೆ, ಧರ್ಮಾಚರಣೆ, ಅವುಗಳ ವಿಚಾರದಲ್ಲಿ ಶ್ರದ್ಧೆ – ಹೀನಸ್ಥಿತಿಗೆ ಇಳಿಯುತ್ತಾ ಹೋಗಿವೆ. ಸಂಸ್ಕೃತ ಪಾಂಡಿತ್ಯವು ಎಷ್ಟೇ ಇದ್ದರೂ ಪಂಡಿತರ ಹೃದಯದಲ್ಲಿ ನೆಲೆಸಿರುವ ರಜಸ್ತಮೋಗುಣಗಳ ಮಿಶ್ರಣದಿಂದಾಗಿ ಶಾಸ್ತ್ರಗಳ ವ್ಯಾಖ್ಯಾನಗಳಲ್ಲೂ, ಅರ್ಥನಿರ್ಧಾರಗಳಲ್ಲೂ ವ್ಯತ್ಯಾಸಗಳು ಎದ್ದು ಕಾಣುತ್ತವೆ. ವೇದಾಂತ ಸಿದ್ಧಾಂತವೆಂದು ಪ್ರಸಿದ್ಧವಾದ ದ್ವೈತಾದ್ವೈತಗಳಿಗೆ ವಿವಿಧ ರೀತಿಯಲ್ಲಿ ಅರ್ಥವಿವರಣೆಗಳಿವೆ, ವೇದವನ್ನು ಆಧಾರವಾಗಿ ಸ್ವೀಕರಿಸಿರುವ ಸಿದ್ಧಾಂತಗಳೇ ಹಲವು ಇವೆ. ಅವುಗಳ ಜೊತೆಗೆ ವೇದಬಾಹ್ಯ ಮತ ಸಿದ್ಧಾಂತಗಳೂ ಅನೇಕವಿವೆ. ಇವಕ್ಕೆಲ್ಲಾ ತತ್ತತ್ಸಿದ್ಧಾಂತಿಗಳ ಹೃದಯದಲ್ಲಿರುವ ತ್ರಿಗುಣಗಳ ತಾರತಮ್ಯವು ಒಂದು ವಿಧದಲ್ಲಿ ಕಾರಣವಾಗಿದೆ. ಭಗವದ್ಗೀತೆಗಂತೂ ನೂರಾರು ವಿದ್ವಾಂಸರು ತಮಗೆ ತೋರಿದಂತೆ ವ್ಯಾಖ್ಯಾನಗಳನ್ನು ಬರೆದಿರುವರು.

ಶ್ರೀ ಎಂ.ಓ.ಎಸ್. ಅಯ್ಯಂಗಾರ್

ಇವನ್ನೆಲ್ಲಾ ಅರಿತೇ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಈ ತ್ರಿಗುಣಗಳು ತತ್ತ್ವಹಿತ ಪುರುಷಾರ್ಥಗಳ ಜ್ಞಾನಾನುಷ್ಠಾನಗಳಲ್ಲಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ವಿಸ್ತಾರವಾಗಿ ವಿವರಿಸಿರುವನು. ಭಗವದ್ಗೀತೆಯು ಉಪನಿಷದ್ಗ್ರಂಥವಾದ್ದರಿಂದ ಅದು ನಿವೃತ್ತಿ ಮಾರ್ಗವನ್ನು ಉಪದೇಶಿಸುತ್ತದೆ. ಪ್ರವೃತ್ತಿ ಮಾರ್ಗದ ವಿಚಾರವನ್ನೂ ಅದರಲ್ಲಿ ಸೂಚಿಸಿ ಅವುಗಳನ್ನು ಫಲಸಂಗದೊಡನೆ ಆಚರಿಸಿದರೆ ಸ್ವರ್ಗಾದಿ, ಅಶಾಶ್ವತ ಫಲಗಳು ದೊರಕುವುವೆಂದೂ, ಆ ಕರ್ಮಗಳನ್ನೇ ಕರ್ತೃತ್ವ, ಫಲಸಂಗ ಮತ್ತು ಮಮತಾ ತ್ಯಾಗದಿಂದ ಭಗವದಾರಾಧನ ರೂಪವಾಗಿ ಅನುಷ್ಠಿಸಿದರೆ ಶಾಶ್ವತ ಮುಕ್ತಿಯು ದೊರಕುವುದೆಂದೂ ವಿಶದಪಡಿಸಿರುವುದು.

## ಸೃಷ್ಟಿಯಲ್ಲಿ ಪ್ರಕೃತಿಯ ತ್ರಿಗುಣಗಳ ಕಾರ್ಯ

ಪ್ರಪಂಚ ಸೃಷ್ಟಿಯಲ್ಲಿರುವುದೆಲ್ಲವೂ ಮೂರು ವಸ್ತುಗಳೇ. ಅವೇ ಪರಮಾತ್ಮ, ಜೀವಾತ್ಮರು ಮತ್ತು ಪ್ರಕೃತಿ. ಪರಮಾತ್ಮನು ಒಬ್ಬನೇ ಅವನು ನಿತ್ಯ ಸತ್ಯ, ಶಾಶ್ವತ ಮತ್ತು ವಿಭು. ಚಿತ್ತೆಂದು ಕರೆಯಲ್ಪಡುವ ಜೀವಾತ್ಮರು ಮತ್ತು ಅಚಿತ್ತೆಂದು ಕರೆಯಲ್ಪಡುವ ಪ್ರಕೃತಿ ಇವರುಗಳ ಇರುವಿಕೆಗೆ (*for their very existance*) ಪರಮಾತ್ಮನ ಅಂತರ್ಯಾಮಿತ್ವವೇ ಕಾರಣವು. ಆದರಿಂದ ಅವೆರಡೂ ಪರಮಾತ್ಮನಿಗೆ ಶರೀರಗಳು, ಇವೆರಡೂ ಶಾಶ್ವತವಸ್ತುಗಳು. ಎಂದರೆ ನಾಶವಿಲ್ಲದವುಗಳು. ಪ್ರಕೃತಿಯು ಸ್ವರೂಪ ಮತ್ತು ಸ್ವಭಾವಗಳೆರಡರಲ್ಲೂ ಬದಲಾವಣೆಗಳನ್ನು ಹೊಂದುತ್ತಲೇ ಇರುತ್ತದೆ. ಆದ್ದರಿಂದ ಅದಕ್ಕೆ ಸ್ಥಿರತ್ವವಿಲ್ಲ. ಜೀವಾತ್ಮನು ಸ್ವರೂಪತಃ ಅಣು, ಶಾಶ್ವತ, ಜ್ಞಾನಾನಂದ ಸ್ವರೂಪನು. ಅವನು ಸ್ವರೂಪ ವಿಕಾರವಿಲ್ಲದೆ ಸ್ಥಿರವಾಗಿರತಕ್ಕವನು. ಆದರೆ ಸೃಷ್ಟಿಯಲ್ಲಿ ಪ್ರಕೃತಿಯ ಸಂಪರ್ಕದಿಂದಾಗಿ ಜ್ಞಾನ ಸಂಕೋಚವೇರ್ಪಟ್ಟು, ಸ್ವಭಾವ ವಿಕಾರವನ್ನು ಪಡೆಯುವನು. ಪ್ರಕೃತಿಯ ಸಂಪರ್ಕದಿಂದ ಬಿಡಲ್ಪಟ್ಟೊಡನೆಯೇ ಆ ಸ್ವಭಾವ ವಿಕಾರವೂ ನಿವೃತ್ತವಾಗುವುದು.

ಪ್ರಪಂಚ ಸೃಷ್ಟಿಯೆಂದರೆ ಚೇತನಾಚೇತನಗಳ ಸಂಯೋಗ ರೂಪವೇ. ಈ ಬ್ರಹ್ಮಾಂಡದಲ್ಲಿ ಹದಿನಾಲ್ಕು ಲೋಕಗಳಿದ್ದು ದೇವ ಮನುಷ್ಯ ತಿರ್ಯಕ್ಸ್ಥಾವರಾದಿ ಅಸಂಖ್ಯಾತ ಜೀವರಾಶಿಗಳಿಂದ ತುಂಬಿ ಹೋಗಿರುವುದು. ಜೀವಸೃಷ್ಟಿಯ ತಾರತಮ್ಯಗಳಿಗೆಲ್ಲಾ ಅವರವರ ಕರ್ಮಗಳೇ ಮೂಲ ಕಾರಣವಾಗಿದ್ದು ಆ ಕರ್ಮಗಳಿಗೆಲ್ಲಾ ಜೀವರುಗಳ ಶರೀರೇಂದ್ರಿಯ ಮನಸ್ಸುಗಳಲ್ಲಿ ಹಾಸುಹೊಕ್ಕಾಗಿ ಸೇರಿ ಕೊಂಡಿರುವ ಸತ್ತ್ವ ರಜಸ್ತಮೋಗುಣಗಳೇ ಮೂಲಕಾರಣ. ಈ ರಜಸ್ತಮೋಗುಣಗಳೇ ಜೀವಾತ್ಮನನ್ನು ಸಂಸಾರದಲ್ಲಿ ಬಂಧಿಸುವುವು. ಈ ಗುಣಗಳು ಜೀವಾತ್ಮನ ಪರಿಶುದ್ಧವಾದ ಜ್ಞಾನವನ್ನು ತೆರೆಯಂತೆ ಮರೆಸಿ ಅನ್ಯಥಾಜ್ಞಾನ ವಿಪರೀತ ಜ್ಞಾನಗಳನ್ನುಂಟು

(33 ನೇ ಪುಟ ನೋಡಿ)



# ಭಗವದ್ಗೀತೆಯ ಕೆಲ ವೈಶಿಷ್ಟ್ಯಗಳು

1. ಭಗವದ್ಗೀತೆಯನ್ನು ಬೋಧಿಸಿದ ಕಾಲ:— ಕಲಿಯುಗಕ್ಕೆ 38 ವರ್ಷಗಳು ಮೊದಲು ಅಂದರೆ ದ್ವಾಪರಯುಗಾಂತದಲ್ಲಿ ಗೀತೆ ಬೋಧಿಸಲ್ಪಟ್ಟಿದೆ. ಕಲಿಯುಗ ಪ್ರಾರಂಭವಾಗಿ ಕ್ರಿ॥ ಶ॥ 1988 ವರ್ಷಕ್ಕೆ 5089 ವರ್ಷಗಳಾಗಿವೆ ಆದ್ದರಿಂದ ಈಗ್ಗೆ ಗೀತೆ ಆವಿರ್ಭವಿಸಿ 5127 ವರ್ಷಗಳಾಗಿವೆ.

2. ಶ್ರೀ ಕೃಷ್ಣಭಗವಾನರ ವಯಸ್ಸು: ಶ್ರೀ ಕೃಷ್ಣಭಗವಾನರ ಅವತಾರಕಾಲ (ಭೂಸಾಧಿವಯಸ್ಸು) 125 ವರ್ಷಗಳು 7 ತಿಂಗಳು 8 ದಿನಗಳು 30 ಘಳಿಗೆಗಳು. ಗೀತೆಯನ್ನು ಬೋಧಿಸುವಾಗ ಶ್ರೀ ಕೃಷ್ಣ ಭಗವಾನರಿಗೆ ಸುಮಾರು 87 ವರ್ಷಗಳು.

3. ಭಗವದ್ಗೀತೆಯನ್ನು ಸಾಕ್ಷಾತ್ತಾಗಿ ಕೇಳಿದವರು:— ಅರ್ಜುನ, ಅರ್ಜುನನ ರಥದ ಮೇಲೆ ಕುಳಿತಿದ್ದ ಹನುಮಂತ, ವ್ಯಾಸ ಮುನಿಗಳು ಮತ್ತು ಸಂಜಯ.

4. ಭಗವದ್ಗೀತೆಯನ್ನು ರಣರಂಗದಲ್ಲಿ ಅರ್ಜುನನಿಗೆ ಬೋಧಿಸಿದ ದಿನ:— ಮಾರ್ಗಶಿರ ಶುದ್ಧ ಏಕಾದಶಿ.

5. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನಿಗೆ ಕೊಟ್ಟ ಹೆಸರುಗಳು:— 38

1 ಅಚ್ಯುತ
2 ಅನಂತ
3 ಅಪ್ರತಿಮಪ್ರಭಾವ
4 ಅರಿಸೂದನ
5 ಜನಾರ್ದನ
6 ದೇವ
7 ದೇವದೇವ
8 ದೇವವರ
9 ದೇವೇಶ
10 ಪರಮೇಶ್ವರ
11 ಪುರುಷೋತ್ತಮ
12 ಪ್ರಭು
13 ಭಗವಂತ
14 ಆದ್ಯ
15 ಕಮಲಪತ್ರಾಕ್ಷ
16 ಕೃಷ್ಣ
17 ಕೇಶವ
18 ಭೂತಭಾವನ
19 ಭೂತೇಶ
20 ಮಧುಸೂದನ
21 ಮಹಾತ್ಮ
22 ಮಹಾಬಾಹು
23 ಮಾಧವ
24 ಯಾದವ
25 ಯೋಗಿ
26 ಯೋಗೇಶ್ವರ
27 ಕೇಶಿನಿಷೂದನ
28 ಗೋವಿಂದ
29 ಜಗತ್ಪತಿ
30 ಜಗನ್ನಿವಾಸ
31 ವಾರ್ಷ್ಣೇಯ
32 ವಾಸುದೇವ
33 ವಿಶ್ವಮೂರ್ತಿ
34 ವಿಶ್ವೇಶ್ವರ
35 ವಿಷ್ಣು
36 ಸರ್ವ
37 ಸಹಸ್ರಬಾಹು
38 ಹೃಷೀಕೇಶ

6. ಅರ್ಜುನನಿಗೆ ಹೆಸರುಗಳು ಗೀತೆಯಲ್ಲಿ 24.

1 ಅನಘ
2 ಅನಸೂಯ
3 ಅರ್ಜುನ
4 ಕಪಿಧ್ವಜ
5 ಕಿರೀಟಿ
6 ಕುರುಪ್ರವೀರ
7 ಕುರುನಂದನ
8 ಕುರುಶ್ರೇಷ್ಠ
9 ಕುರುಸತ್ತಮ
10 ಕೌಂತೇಯ
11 ಗುಡಾಕೇಶ
12 ತಾತ
13 ದೇಹಭೃತಾಂವರ
14 ಧನಂಜಯ
15 ಪರಂತಪ
16 ಪಾಂಡವ
17 ಪಾರ್ಥ
18 ಪುರುಷರ್ಷಭ
19 ಭರತರ್ಷಭ
20 ಭರತಶ್ರೇಷ್ಠ
21 ಭರತಸತ್ತಮ
22 ಭಾರತ
23 ಮಹಾಬಾಹು
24 ಸವ್ಯಸಾಚಿ

7. ಗೀತೆಯ ನಾಮಗಳು 18.

1 ಗೀತ
2 ಗಂಗ
3 ಗಾಯತ್ರಿ
4 ಸೀತ
5 ಸತ್ಯ
6 ಸರಸ್ವತಿ
7 ಬ್ರಹ್ಮ ವಿದ್ಯ
8 ಬ್ರಹ್ಮವಲ್ಲಿ
9 ತ್ರಿಸಂಧ್ಯ
10 ಮುಕ್ತಿಗೇಹಿನಿ
11 ಅರ್ಧಮಾತ್ರ
12 ಚಿದಾನಂದ
13 ಭವಘ್ನಿ
14 ಭ್ರಾಂತಿನಾಶಿನಿ
15 ವೇದತ್ರಯಿ
16 ಪರ
17 ಅನಂತ
18 ತತ್ತ್ವಾರ್ಥಜ್ಞಾನ ಮಂಜರಿ

8. ಗೀತೆಯಲ್ಲಿ ಅಧ್ಯಾಯಗಳು:— 18

ಈ 18 ಸಂಖ್ಯೆಯ ವಿಶೇಷ :—

ಮಹಾಭಾರತ ಯುದ್ಧ ನಡೆದ ದಿನಗಳು 18.

ಯುದ್ಧದಲ್ಲಿ ಸೈನಿಕ ಸಂಖ್ಯೆ :
18 ಅಕ್ಷೌಹಿಣಿ ಎಂದರೆ:—
ಆನೆಗಳು 21870 = 2+1+8+7+0=18
ರಥಗಳು 21870=2+1+8+7+0=18
ಕುದುರೆಗಳು 65610=6+5+6+1+0= 18
ಕಾಲ್ಬಲ 109350= 1+0+9+3+5+0=18

ಮಹಾಭಾರತ ಗ್ರಂಥದಲ್ಲಿ ಪರ್ವಗಳು:— 1

**ಶ್ರೀ ಕೋಲಾರ ಕೃಷ್ಣೈಯ್ಯರ್**

# ತಿರುಪ್ಪಾವೈ - ರಹಸ್ಯಾರ್ಥ

ಶ್ರೀವಿಷ್ಣುಚಿತ್ತ ಕುಲ ನಂದನ ಕಲ್ಪವಲ್ಲೀಮ್ ।
ಶ್ರೀರಂಗರಾಜ ಹರಿಚಂದನ
ಯೋಗದೃಶ್ಯಾಮ್ ।
ಸಾಕ್ಷಾತ್ ಕ್ಷಮಾಂ ಕರುಣಯಾ ಕಮಲ
ಮಿವಾನ್ಯಾಮ್ ।
ಗೋದಾಮನನ್ಯ ಶರಣಃ ಶರಣಂ ಪ್ರಪದ್ಯೇ ॥

ತಮಿಳು ಕೃತಿಗಳಲ್ಲಿ ಈಗ ನಮಗೆ ಉಪಲಬ್ಧವಾಗಿರುವ ಸುಸಂಪೂರ್ಣರೂಪದ 'ಪಾವೈ' ಗ್ರಂಥಗಳು ಎರಡು ಮಾತ್ರ. ಒಂದನೆಯದು ಅಂಬಿಕೆ ಗಣಾಂಬಿಕೆ ಗೌರಿ ಗಂಗೆ ಉಮೆ ಪರಾಶಕ್ತಿ ಆದಿಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗಳೆಂಬ ನವವಿಧ ಶಕ್ತಿದೇವತೆಗಳನ್ನು ಸ್ತುತಿಸಿ ತಿರುವಣ್ಣಾಮಲೈಯಲ್ಲಿ ರಚಿಸಿದ ಇಪ್ಪತ್ತು ಪದ್ಯಗಳುಳ್ಳ ಮಾಣಿಕ್ಯವಾಚಕರವರ "ತಿರುವೆಂಬಾವೈ" ಎಂಬ ಶೈವಗ್ರಂಥ. ಇದರ ಪ್ರತಿಪದ್ಯವೂ "ಏಲೋರೆಂಬಾವಾಯ್" ಎಂದು ಮುಕ್ತಾಯವಾಗುತ್ತದೆ. ಆದರೆ ಈ ಪದ್ಯಮಾಲಿಕೆಯಲ್ಲಿ ರಾಗ ತಾಳ ಲಯಗಳ ವಿನ್ಯಾಸವಿಲ್ಲ.

ಎರಡನೆಯದೇ ವೈಷ್ಣವ ಜಗತ್ತಿನಲ್ಲಿ ಪ್ರಖ್ಯಾತವಾಗಿರುವ ತಿರುಪ್ಪಾವೈ; ಶ್ರೀಗೀತೆ; ಪಾಮರೋದ್ಧಾರಕ ಪ್ರಣಯ ಗೀತೆ; ಮಾರ್ಗಶೀರ್ಷ ವ್ರತಗಾಥಾ ಗೀತೆ; ಶ್ರೀಕೃಷ್ಣಲೀಲಾ ಪ್ರಬಂಧ; ಶ್ರೀಭಗವದ್ಭಾಗವತ ಸುಪ್ರಭಾತ; ಉಪನಿಷತ್ಸಾರಾಮೃತ; ಶ್ರೀಗೋದೋಪನಿಷತ್; ಭಕ್ತಿಗಿಂತ ಮಿಗಿಲಾದ ಪ್ರಪತ್ತಿ ಸುಧೆ; ಗಾನಸುಧಾ; ಹೃದಯ ಸ್ಪರ್ಶಕ ತಣ್ಣೀರನ್ನೀವ ಹಿಮಕಿರಣ; ಇದರಲ್ಲಿ ಛಂದಮಾಲೀನ ಮುವ್ವತ್ತು ಪದ್ಯಗಳು ಅಡಕವಾಗಿವೆ; ಮನಮೋಹಕವಾದ ಇಪ್ಪತ್ತನಾಲ್ಕು ರಾಗಗಳಲ್ಲಿ, ನಾಲ್ಕು ತಾಳಗಳಲ್ಲಿ ವ್ಯವಸ್ಥಿತವೆ. ಇವು ಭಕ್ತಿಗೆ ಹೆಸರಾಂತ ಬಿಲಹರಿ ರಾಗದಲ್ಲಿ ಪ್ರಾರಂಭವಾಗಿ ಸುರುಟಿಯಲ್ಲಿ ಮುಕ್ತಾಯವಾಗುತ್ತವೆ.

ಈ ರಸವತ್ಕೃತಿಯ, ಭಾವಾಭಿವ್ಯಕ್ತಿಯ ಗೀತೆಯನ್ನು ಹಾಡಿರುವ ಕವಯಿತ್ರಿ (ಕಿ.ಶ. 500) ದ್ವಾದಶ ವೈಷ್ಣವ ಆಳ್ವಾರುಗಳಲ್ಲಿ ಒಬ್ಬ

ಶ್ರೀ ಕೆ. ದೊರೆಸ್ವಾಮಿ ಅಯ್ಯಂಗಾರ್



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |

(ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ)

| | | |
|---|---|---|
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |

(ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ)
(ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-)

| | | |
|---|---|---|
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್ ಸೇವೆ | ಸಂಜೆ | 7–00 ಗಂಟೆಗೆ |

(ಮುಖ ಮಂಟಪದಲ್ಲಿ, ಶುಲ್ಕ ರೂ 150/–)
(5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು.)

| | | |
|---|---|---|
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಳಾದ ಭಗವದ್ಭಾಗವತೋತ್ತಮೆ ಆಂಡಾಳ್. ಈಕೆ ವಿಲ್ಲಿಪುತ್ತೂರಿನ ವಿಷ್ಣುಚಿತ್ತರ ಸಾಕು ಮಗಳು. ಕೇವಲ ಬಾಲ್ಯಾವಸ್ಥೆಯಲ್ಲಿಯೇ ಪರಿಪಕ್ವ ಜ್ಞಾನನಿಧಿಯಾಗಿ "ಪಿಂಜಾಯ್ ಪಳುತ್ತಾಳ್" ಎಂಬ ಪ್ರಶಸ್ತಿಗೆ ಪಾತ್ರಳಾದಳು. ಭಕ್ತಿಜ್ಞಾನ ವೈರಾಗ್ಯಗಳ ತ್ರಿವೇಣೀಸಂಗಮವೇ ಆಕೆಯ ಜೀವನದ ರಹಸ್ಯ. ಅವಳಿಗೆ ಐಹಿಕ ಸುಖಾದಿಗಳಲ್ಲಿ ಎಷ್ಟು ವಿರಕ್ತಿಯೋ ಪರಮ ವೈರಾಗ್ಯದಲ್ಲಿ ಅಷ್ಟೇ ಆಸಕ್ತಿ. ಮದುವೆಯ ವಯಸ್ಸು ಪ್ರಾಪ್ತವಾದಾಗ "ಮಾನಿಡವರ್ಕೆನ್ರು ಪೇಚ್ಚುಪ್ಪಡಿಲ್ ವಾಳಕಿಲ್ಲೇನ್'' ತನ್ನನ್ನು ಮಾನವರಿಗೆ ಕೊಟ್ಟು ಮದುವೆ ಮಾಡಿಸುವುದಾದರೆ ಇನ್ನು ಬದುಕಿರುವುದಿಲ್ಲ" ಎಂದು ಪ್ರತಿಜ್ಞೆ ಮಾಡಿ ಬಿಟ್ಟಳು. ಇದು ಯಾವ ಭೀಷ್ಮಪ್ರತಿಜ್ಞೆಗೂ ಕಡಮೆಯಾದುದಲ್ಲ. ಅವಳ ಕಾಮ ದೇವಕಾಮ; ಮಾನವ ಕಾಮವಲ್ಲ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬಂತೆ ತನ್ನ ಜನ್ಮಭೂಮಿಯಾದ ವಿಲ್ಲಿಪುತ್ತೂರಿನ ವಟಪತ್ರಶಾಯಿಯ ಸಾನ್ನಿಧ್ಯದಲ್ಲಿ ಲೀನಳಾಗಬೇಕೆಂಬ ಪರಮಕಾತರ ಅವಳ ಪೇರಾಸೆ. ಕೋಲನ್ನರಸಿ ಓಡುವ ದಾಂಗುಡಿಯಂತೆ ಅವಳ ಮಾನಸ ಹಂಸ "ಮಾಲ್‌ತೇಡಿಯೋಡುಂ" – ಶ್ರೀಕೃಷ್ಣನನ್ನೇ ಹುಡುಕಿಕೊಂಡು ಓಡುವುದು. ಮಿಕ್ಕ ಆಳ್ವಾರುಗಳು ಭಗವತ್ಪ್ರೇಮವನ್ನು ಸಾಧಿಸಲು ತಾವು ಹೆಣ್ಣೆಂದು ಭಾವಿಸಿಕೊಂಡು ಪ್ರಣಯಗೀತೆಗಳನ್ನು ಹಾಡಿದರು; ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡರು. ಇವೇ ನಾಲ್ಕು ಸಾವಿರ ದಿವ್ಯಪ್ರಬಂಧಗಳು. ಆಂಡಾಳಿಗೆ ಮಾತ್ರ ಈ ಕಾಲ್ಪನಿಕ ಭಾವಪರಾವರ್ತನೆಯ ಆವಶ್ಯಕತೆ ಬೇಕಾಗಿರಲಿಲ್ಲ. ತಾನು ಸ್ವಭಾವತಃ ಸ್ತ್ರೀ; ಜನಕಪುತ್ರಿಯಾದ ಸೀತೆಗೆ ಶಿವಧನುರ್ಭಂಜನವು ನೆರವಾಯಿತು ಶ್ರೀರಾಮಚಂದ್ರನ ಪಾಣಿಗ್ರಹಣಕ್ಕೆ; ಕುಂಭನ ಪುತ್ರಿ ನಪ್ಪಿನ್ನೈಗೆ ಸಪ್ತವೃಷಭ ದಮನವೇ ಶ್ರೀಕೃಷ್ಣ ಸಾನ್ನಿಧ್ಯ ಸಂಪಾದನೆಗೆ ಸಹಾಯಕವಾಯಿತು. ಪಾಂಚಾಲಿಗೆ ಮತ್ಸ್ಯಯಂತ್ರ ಭೇದನವು ಪಂಚವಲ್ಲಭತ್ವಕ್ಕೆ ಕಾರಣವಾಯಿತು. ತನಗಾದರೋ ಯಾವ ನೆರವೂ ಒದಗಿಬರಲಿಲ್ಲವೆಂದು ಕಳವಳಿಸುತ್ತ ಆಂಡಾಳ್ ಸಾಕ್ಷಾತ್ ಮನ್ಮಥನಾದ ಮಹಾವಿಷ್ಣುವನ್ನು ಬಯಸಿ, ಚಕ್ರಪಾಣಿಯಾದ ವೇಂಕಟಾದ್ರಿವಾಸನೊಡನೆ ನನ್ನನ್ನು ಸೇರಿಸಿ ಬಿಡಬಾರದೆ?' ಎಂದು ಕಾಮದೇವನನ್ನು ಬೇಡಿಕೊಂಡಳು, ತನ್ನ ನಾಚ್ಚಿಯಾರ್ ತಿರುಮೊಳಿಯಲ್ಲಿ ತನ್ನೊಲವಿನ ನಲ್ಲನಾದ ಶ್ರೀಕೃಷ್ಣನನ್ನು ಮೆಚ್ಚಿಸಲು ರಾಗತಾಳಲಯಗಳೊಡನೆ ಹಾಡಿ ಆಡಿ ಹಾಡಿ ಮಾರ್ಗಶೀರ್ಷ ವ್ರತಾಚರಣೆಯಲ್ಲಿ ತೊಡಗಿದಳು. ಕಂಸಾಸುರನು ಭಯದಿಂದ, ಶಿಶುಪಾಲನು ದ್ವೇಷದಿಂದ, ಯಾದವರು ಸಂಬಂ

ಧದಿಂದ, ಪಾಂಡವರು ಸ್ನೇಹದಿಂದ, ಶುಕ ಬ್ರಹ್ಮರು ಭಕ್ತಿಯಿಂದ, ಗೋಪಿಯರು ಕಾಮದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಂತೆ ಆಂಡಾಳ್ ಧರ್ಮಕ್ಕೆ ಅವಿರೋಧವಾದ ಮಧುರ ಭಾವದಿಂದ ಶ್ರೀಕೃಷ್ಣನ ಕೃಪಾವಲೋಕನಕ್ಕೆ ಪಾತ್ರಳಾದಳು. "ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ" ಎಂಬ ಶ್ರೀಕೃಷ್ಣನ ಮಾತಿನ ಮೋಡಿಯನ್ನರಿತವಳಲ್ಲವೆ ಆಂಡಾಳ್!

ಆಂಡಾಳ್ ತನ್ನ ವ್ರತಕ್ಕೆ ಮಾರ್ಗಶೀರ್ಷ ಮಾಸವನ್ನೇಕೆ ಆರಿಸಿಕೊಂಡಳು? ಹಿರಿಯರು ಮೆಚ್ಚಿದ ಮಾರ್ಗ ಅಥವಾ ರೀತಿ ಇದು– "ಮಹಾಜನೋ ಯೇನ ಗತಸ್ಸಪಂಥಾಃ''. ಇದಲ್ಲದೆ ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ ಹೇಳಿಕೊಂಡಿರುವಂತೆ "ಬೃಹತ್ಸಾಮ ತಥಾ ಸಾಮ್ನಾಂ । ಗಾಯತ್ರೀ ಛಂದಸಾಮ್ ॥ ಮಾಸಾನಾಂ ಮಾರ್ಗಶೀರ್ಷೋಽಸ್ಮಿ ॥ ಕುಸುಮಾನಾಂ ಕುಸುಮಾಕರಃ ॥" ಆದಕಾರಣ ಮಾರ್ಗಶೀರ್ಷಮಾಸವು ವಿಷ್ಣು ಮಾಸ; ಶ್ರೀಕೃಷ್ಣ ಮಾಸ.

'ತಿಂಗಳ್' ಚಂದ್ರನಿಗೆ ಅನ್ವಯಿಸುವ ಹೆಸರು; ಚಂದ್ರಿಕೆಯೆಂದೂ ಆಗುತ್ತದೆ. ಚಂದ್ರನು ತನ್ನ ವೃದ್ಧಿಯ ಕಾಲವನ್ನು ಶುಕ್ಲಪಕ್ಷವೆಂದೂ (ವಳರ್ ಪಿರೈ), ಕ್ಷೀಣತೆಯ ಕಾಲವನ್ನು ಕೃಷ್ಣಪಕ್ಷವೆಂದೂ (ತೇಯ್ ಪಿರೈ) ಪ್ರತಿಮಾಸವನ್ನೂ ವಿಭಾಗಿಸುವುದರಿಂದ ತಿಂಗಳೆಂದರೆ ಮಾಸವೆಂಬ ಅರ್ಥ ಸ್ವಭಾವಸೂಚಕವಾಗಿದೆ.

ಶುಕಬ್ರಹ್ಮರು ತಮ್ಮ ಶ್ರೀಭಾಗವತದ ಆದಿಯಲ್ಲಿ "ನಿಗಮತರೋರ್ಗಳಿತಂ ಫಲಂ ಶುಕಮುಖಾದಮೃತದ್ರವ ಸಂಯುತಮ್... ರಸಮಾಲಿಯಮ್" ಎಂದು ಹಾಡುತ್ತ ದಶಮಸ್ಕಂಧದ ಮೂವತ್ತಮೂರನೆಯ ಅಧ್ಯಾಯದಲ್ಲಿ ಗೋಪಸ್ತ್ರೀಯರ ರಾಸಕ್ರೀಡೆಯನ್ನು ವರ್ಣಿಸಿದ್ದಾರೆ. ಗೋಪಿಯರು ಶ್ರೀಕೃಷ್ಣನೊಡನೆ ರಾಸಕ್ರೀಡೆಯಲ್ಲಿ ತೊಡಗಿದಾಗ ತಮ್ಮ ತನುಮನಗಳನ್ನು ಮರೆತು ಕಣ್ಣಿಟ್ಟಕಡೆ ಕೃಷ್ಣನನ್ನು ಕಂಡು ಮೋಹಪರವಶರಾಗುತ್ತಾರೆ. ಆಗ ತಮ್ಮ ಸ್ವಪ್ನಗಳಲ್ಲಿ ಪರಮಾತ್ಮನ ದರ್ಶನ ಲಭ್ಯವಾಗಲು ತಮ್ಮ ಗೋಪಿಕಾಗೀತೆಯ ಹತ್ತನೆಯ ಶ್ಲೋಕದಲ್ಲಿ

ಪ್ರಹಸಿತಂ ಪ್ರಿಯ ಪ್ರೇಮ ವೀಕ್ಷಣಂ
ವಿಹರಣಂ ಚ ತೇ ಧ್ಯಾನಮಂಗಲಮ್ ।
ರಹಸಿ ಸಂವಿದೋ ಯಾ ಹೃದಿ ಸ್ಪೃಶಃ
ಕುಹಕ ನೋ ಮನಃ ಕ್ಷೋಭಯಂತಿ ಹಿ ॥

ಎಂದು ಹಾಡಿಕೊಳ್ಳುತ್ತ ಶ್ರೀಕೃಷ್ಣಲೀಲಾಮೃತ ಸಾಗರದಲ್ಲಿ ಮುಳುಗಿ ಮೈಮರೆತರು. ಅಂತೆಯೇ ಆಂಡಾಳ್ ತನ್ನ ತಿರುಪ್ಪಾವೈ ಪದ್ಯಮಾಲಿಕೆಯ ಐದನೆಯ ಪಾಶುರದಲ್ಲಿ ಮಧುರ ನಾಯಿಕಾ ಭಾವಾವೇಶದಲ್ಲಿ ಶ್ರೀಕೃಷ್ಣನನ್ನು 'ಮಾಯಾಮಯ, ಆಶ್ಚರ್ಯಗುಣಚೇಷ್ಟಿತ, ಅಪ್ರತಿಮೋತ್ತರ ಮಧುರಾನಾಯಕ. ಗೋಕುಲ ಮಣಿದೀಪ, ದಾಮೋದರ, ವಾಚಾಮಗೋಚರ – ಎಂದು



ಮೊದಲಾಗಿ ಹೊಗಳುತ್ತ ಭಗವದ್ಭಕ್ತಿಸಾಗರದಲ್ಲಿ ಲೀನಳಾಗಿದ್ದಾಳೆ.

ಶ್ರೀಭಾಗವತದಲ್ಲಿ ಉಕ್ತವಾಗಿರುವ ಕಾತ್ಯಾಯನೀ ವ್ರತದಂತೆ, 'ಪಾವೈನೋನ್ಬು' ಎಂಬ ವ್ರತಾಚರಣೆಯಲ್ಲಿ ತೊಡಗಿದ್ದಾಳೆ ಆಂಡಾಳ್, ಗೋಪಿಯರು "ನಂದಗೋಪ ಸುತಂ ದೇವಿ ಪತಿಂ ಮೇ ಕುರು, ತೇ ನಮಃ" ಎಂದು ಪ್ರಾರ್ಥಿಸಿದಂತೆ, ಆಂಡಾಳ್ ತನ್ನ 'ನಾಚ್ಚಿಯಾರ್ ತಿರುಮೊಳಿ' ಯಲ್ಲಿ ಕಾಮದೇವನ ನೆರವಿನಿಂದ ಶ್ರೀಕೃಷ್ಣಪರಮಾತ್ಮನು ತನ್ನ ಪತಿಯಾಗಬೇಕೆಂದು ಬಯಸಿದ್ದಾಳೆ. ತನ್ನ ಪ್ರಣಯಗೀತೆಯಾದ ತಿರುಪ್ಪಾವೈಯಲ್ಲಿ ಶ್ರೀಕೃಷ್ಣನನ್ನು ನಾರಾಯಣ ಶಬ್ದದಿಂದ ಮೊದಲುಗೊಂಡು ಐವತ್ತೊಂದು ಹೆಸರುಗಳಿಂದ ಕರೆಯುತ್ತಾಳೆ; ಮನವಾರೆ ಮೊರೆಯಿಡುತ್ತಾಳೆ.

ಅಕಾರ ಉಕಾರ ಮಕಾರ ರೂಪವಾದ ಓಂಕಾರದ ರಹಸ್ಯಾರ್ಥವು ತಿರುಪ್ಪಾವೈಯಲ್ಲಿ ಅಡಕವಾಗಿದೆ ಎಂಬುದು ಪೂರ್ವಾಚಾರ್ಯರುಗಳ ಅಭಿಪ್ರಾಯ. ಈ ಪದ್ಯಮಾಲಿಕೆಯ 17 ನೆಯ 'ಅಂಬರಮೇ ತಣ್ಣೀರೇ' ಎಂಬ ಪಾಶುರದಲ್ಲಿ ಉಕಾರದ ಅರ್ಥಪುಷ್ಟಿಯೂ, 20 ನೆಯ "ಮುಪ್ಪತ್ತುಮೂವರಮರರ್" ಪದ್ಯದಲ್ಲಿ ಮಕಾರದ ತತ್ತ್ವವೂ ಅಡಗಿ, ಅರ್ಥಪಂಚಕ ಜ್ಞಾನ ಮತ್ತು ಜೀವೇಶ್ವರ ತತ್ತ್ವಗಳು, ತಿರುಮಂತ್ರ, ದ್ವಯಮಂತ್ರ, ಚರಮ ಮಂತ್ರಗಳ ರಹಸ್ಯಗಳು ಸೂಚಿತವಾಗಿವೆ.

ಈ ಪದ್ಯಮಾಲೆಯ 30 ಪದ್ಯಗಳನ್ನು ಶ್ರೀಮದ್ವೇದಾಂತದೇಶಿಕರು "ನೇಯಮುಡನ್ ತಿರುಪ್ಪಾವೈಪ್ಪಾಟ್ಟು ಆರೈಂದುಮ್" ಅಂದರೆ ಐದೈದು ಪದ್ಯಗಳ ಆರು ಗುಂಪುಗಳಾಗಿ ವಿಂಗಡಿಸಬಹುದೆಂದಿದ್ದಾರೆ. ಮೊದಲನೆಯ ಪದ್ಯಗಳಲ್ಲಿ ಅರ್ಥಪಂಚಕಗಳು ಸೂಚಿತವಾಗಿವೆ; ಎರಡನೆಯ ಹತ್ತು ಪಾಶುರಗಳಲ್ಲಿ ಆಂಡಾಳ್ ತನ್ನ ಗೆಳತಿಯರನ್ನು ಎಚ್ಚರಗೊಳಿಸುವ ನೆಪದಲ್ಲಿ ಪೆರಿಯಾಳ್ವಾರ್, ಕುಲಶೇಖರಾಳ್ವಾರ್, ನಮ್ಮಾಳ್ವಾರ್, ತಿರುಮಳಿಶೈಯಾಳ್ವಾರ್, ಪೇಯಾಳ್ವಾರ್, ಪೂದತ್ತಾಳ್ವಾರ್, ಪೊಯ್‌ಹೈಯಾಳ್ವಾರ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್–ಇವರುಗಳನ್ನು ಸ್ವಾಪದೇಶಕ್ರಮದಿಂದ ಎಚ್ಚರಗೊಳಿಸುವುದು ಕಂಡುಬರುತ್ತದೆ. ಮೂರನೆಯ ಐದು ಪದ್ಯಗಳಲ್ಲಿ ಕೃಷ್ಣಭಕ್ತರ ಮತ್ತು ಕೃಷ್ಣನ ಮೊರೆ ಹೋಗುವುದು, ನಾಲ್ಕನೆಯ ಎಂದರೆ 25 ನೆಯ ಪದ್ಯದವರೆಗೆ ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಗೋಪ್ತೃತ್ವ ಆವರಣ, ಕಾರ್ಪಣ್ಯವೆಂಬ ಐದು ಅಂಗಗಳುಳ್ಳ ಶರಣಾಗತಿ ಅಥವಾ ಪ್ರಪತ್ತಿಮಾರ್ಗವನ್ನು ಉಪದೇಶಿಸಲಾಗಿದೆ. ಈ ಮಾರ್ಗಕ್ಕೆ ತಮಿಳಿನಲ್ಲಿ 'ಅಡೈಕ್ಕಲಮ್' ಎಂಬ ಹೆಸರಿದೆ. ಇದು ವೈಷ್ಣವ ಸಿದ್ಧಾಂತ ರೀತಿಯಾದರೆ, ಶೈವಸಿದ್ಧಾಂತದಲ್ಲಿಯೂ ಈ ಮಾರ್ಗವನ್ನು ಕಾಣಬಹುದು, 26 ರಿಂದ 30 ನೆಯ ಪಾಶುರಗಳಲ್ಲಿ ಅನನ್ಯ ಶರಣತ್ವ ಮತ್ತು ಫಲಪ್ರಾಪ್ತಿಗಳು ಉಕ್ತವಾಗಿವೆ. ಆಂಡಾಳ್ ತಿರುಪ್ಪಾವೈಯ ಪದ್ಯದಲ್ಲಿ "ನಾರಾಯಣನೇ ನಮಕ್ಕೇ ಪರೈ ತರುವಾನ್" ಎಂದು ನಂಬಿದ್ದು ಕಡೆಯ ಪಾಶುರದಲ್ಲಿ ತನ್ನ ಇಷ್ಟಾರ್ಥದ ಪರೈ (ಮೋಕ್ಷ) ವನ್ನು ಪಡೆದು ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರಳಾದಳೆಂಬ ಫಲಶ್ರುತಿ ಉಕ್ತವಾಗಿದೆ.

ಹಲವಾರು ನಿಗೂಢ ತತ್ತ್ವೋಪದೇಶಕ ಗ್ರಂಥವೆಂದರೆ ತಿರುಪ್ಪಾವೈ. ಹ್ರಸ್ವ–ಮಧುರ–ಗಂಭೀರ ಎಂಬೀ ಗುಣತ್ರಯವುಳ್ಳದ್ದು. ಇದು ಜಗತ್ತಿನ ಜನವೆಲ್ಲ ಮೆಚ್ಚುವಂತೆ ಉದ್ಬೋಧನೆ, ಪ್ರಕೃತಿ ವರ್ಣನೆ, ವ್ಯಕ್ತಿವರ್ಣನೆ, ಫಲಪ್ರಾಪ್ತಿಯ ಭಾವನೆಗಳ ಆಕರ; ಜೀವಜೀವೇಶ್ವರ ತತ್ತ್ವವನ್ನು ಬೋಧಿಸುತ್ತದೆ.

ಮುತ್ತಿಕ್ಕುರುಳ್ ಕೂಡ ಮಾನ್ರೃತ್ತಿಳಿ
ಮುನ್ನಮ್ ।
ಇತ್ತಿಕಾಲ್ ಏಕ್ಕ್ಯಮಿಡವ್
(ಮುಕ್ತಿಯನು ಅರಸಲ್ ಮುನ್ನರಿ ಮಾರನಂ;
ಯುಕ್ತಮಪ್ಪುದುಪಾಯಂ)
ಮೂನ್ರಿಲ್ ಒರುಮೂನ್ರುಂ ಮೂವಿರಂಡುಂ
ಮುಕ್ಕಾನ್ನ್ಗವ್
ತೋನ್ರ ಕೊಳ್ಳೈಯುಂ ತುಯರ್

(ಮೂರರಲಿ ಮೂರೊಂದು ಮೂರೆರಡು, ಈರಾರನರಿಯಲ್ ಅಳಿವುದು ದುಗುಡು), ಮೂರು ಪದಗಳುಳ್ಳ, ತಿರುಮಂತ್ರ, ಆರುಪದಗಳುಳ್ಳ ದ್ವಯಮಂತ್ರ, ಹನ್ನೆರಡು ಪದಗಳುಳ್ಳ ಚರಮ ಮಂತ್ರ –ಇವುಗಳ ತತ್ತ್ವವನ್ನರಿತರೆ ಸಂಸಾರ ದುಃಖವು ತೊಲಗುತ್ತದೆ ಎಂಬುದಾಗಿ ಶ್ರೀ ವೇದಾಂತದೇಶಿ ಉಪದೇಶಿಸಿರುವ ರಹಸ್ಯಾರ್ಥಗಳೆಲ್ಲವನ್ನೂ ತಿರುಪ್ಪಾವೈಯಲ್ಲಿ ಕಾಣಬಹುದು.

ತಿರುಪ್ಪಾವೈಯ ಪ್ರತಿಪದ್ಯವೂ "ಏಲೋರೆಂಬಾವಾಯ್" ಎಂದು ಮುಕ್ತಾಯವಾಗುತ್ತದೆ, ದಾಸರ ಪದಗಳ ಪಲ್ಲವಿಯಂತೆ. ಇದಕ್ಕೆ ನಾನಾರ್ಥಗಳಿವೆ :– (1) ಮಾರ್ಗಶಿರಮಾಸದ ವ್ರತಾಚರಣೆಯಿಂದ ಲಭಿಸತಕ್ಕ ಫಲವನ್ನು ಇಷ್ಟವಿದ್ದರೆ ನಮ್ಮಂತೆ ಸವಿಯಿರಿ; (2) ಈ ಪದ್ಯಮಾಲೆಯನ್ನು ಹಾಡಿ ಅರ್ಥಗ್ರಹಣಮಾಡಿರಿ; (3) ಈ ಮೂವತ್ತು ಪಾಶುರಗಳನ್ನು ತಪ್ಪದೆ ಹಾಡಿ ಬಾಯಿಪಾಠ ಮಾಡಿರಿ; (4) ನಿಮ್ಮ ಮಹಿಷಿಯಾದ ಲಕ್ಷ್ಮೀದೇವಿಯನ್ನು ನಿಮ್ಮ ಮನದಲ್ಲಿ ಸ್ಥಿರಗೊಳಿಸಿ ಇಷ್ಟಾರ್ಥಗಳನ್ನು ಕೈಗೂಡಿಸಿಕೊಳ್ಳಿರಿ; (5) ಓ ಜಗಜ್ಜನನಿ, ನಮ್ಮ ಪ್ರಾರ್ಥನೆ ನಿಮ್ಮ ಮನ ಮುಟ್ಟಲಿ– ಎಂದು ಮೊದಲಾಗಿ.

ತಿರುಪ್ಪಾವೈ ಉಪನಿಷತ್ ಸಾರಸರ್ವಸ್ವ. ಮುಂಡಕ, ಮಾಂಡೂಕ್ಯ, ಶ್ವೇತಾಶ್ವತರ ಛಾಂದೋಗ್ಯ, ತೈತ್ತಿರೀಯ, ಕಠ, ಈಶಾವಾಸ್ಯ, ನಾರಾಯಣ, ಬೃಹದಾರಣ್ಯಕ, ಸುಬಾಲ, ಕೌಶೀತಕೀ ನೃಸಿಂಹತಾಪನೀಯ ಉಪನಿಷತ್ತುಗಳು, ಭಾರತಭಾಗವತ ರಾಮಾಯಣ ಮುಂತಾದ ಪುರಾಣೇತಿಹಾಸಗಳು, ಮನುಧರ್ಮಶಾಸ್ತ್ರ, ವಿಷ್ಣುಪುರಾಣ ಭಗದ್ಗೀತೆ ಬ್ರಹ್ಮಸೂತ್ರ ಪುರುಷಸೂಕ್ತ, ಋಗ್ವೇದ ತಿರುವಾಯ್ಮೊಳಿ – ಇವುಗಳಲ್ಲಿ ಉಪದಿಷ್ಟವಾಗಿರುವ ರಹಸ್ಯಗಳೆಲ್ಲವೂ ತಿರುಪ್ಪಾವೈಯಲ್ಲಿ ಸಂದರ್ಭೋಚಿತವಾಗಿ ಮಿನುಗುತ್ತಿವೆ. ಈ ಗೀತೆ ವಿಶಿಷ್ಟಾದ್ವೈತಸಿದ್ಧಾಂತದ ಮತ್ತು ಶ್ರೀವೈಷ್ಣವ ಸಂಪ್ರದಾಯದ ಸಾರವನ್ನು ಬೆಳಗುತ್ತದೆ. ಇದೊಂದು ಅತಿಶ್ರೇಷ್ಠವಾದ ತಮಿಳು ಪ್ರಬಂಧವಲ್ಲದೆ ಗೋಪಿಕಾಗೀತೆ ಗೋದಾದೇವಿಯ ದೈವಿಕ ಶೃಂಗಾರವು ಭಕ್ತಿಭಾವದಲ್ಲಿ, ಪ್ರಪತ್ತಿಯಲ್ಲಿ ಪರ್ಯವಸಾನವಾಗಿದೆ. ಇಲ್ಲಿಯ ಪ್ರಣಯಮಾಧುರ್ಯ ಶ್ರೀಕೃಷ್ಣಪ್ರೇಮದಲ್ಲಿ ಸಾರ್ಥಕಗೊಂಡಿದೆ. ತನ್ನ ಈ ಪ್ರೇಮೋತ್ಕರ್ಷವನ್ನು ಅನುಭವಿಸುತ್ತ ಗೋದೆ – ಮೈಮರೆತು, "ಎಲಾಪ್ಪೈರುಳುಕ್ಕೈಪ್ಪಾನ್" (ಸುಳ್ಳುಹೇಳುವವನು), 'ತರುಮಮರಿಯಾದ ಕುರುಂಬನ್' (ಧರ್ಮವರಿಯದ ಕುರುಬಿ), "ಪುರಂಡೋಲ್ ಉಳ್ಳುಂ ಕರಿಯಾನ್" (ಬಾಹ್ಯಾಂತರಂಗ ನೀಲಮೇಘಶ್ಯಾಮ) ಎಂದು ಮೊದಲಾಗಿ ಶ್ರೀಕೃಷ್ಣನನ್ನು ತನ್ನ ನಾಚ್ಚಿಯಾರ್ ತಿರುಮೊಳಿಯಲ್ಲಿ ನಿಂದಾಸ್ತುತಿ ಮಾಡಿರುವುದನ್ನು ಸ್ಮರಿಸಿಕೊಳ್ಳಬಹುದು.

ಆಂಡಾಳ್ ಆರ್ಯ ಮತ್ತು ದ್ರಾವಿಡ ವೇದಾಂತಗಳೆರಡೂ ಹಾಸು ಹೊಕ್ಕಾಗಿ ಕಲೆತಿರುವ ಉಭಯವೇದಾಂತಮಾರ್ಗಾನುಸಾರಿಣಿ ಆದಕಾರಣ ಆಕೆ ಶ್ರೀರಂಗನಾಥನ ಸನ್ನಿಧಿಗೆ ಐತರುವಂದು ಭಾಗವತೋತ್ತಮರನೇಕರು ಆಕೆಯನ್ನು ಕುರಿತು,

ಆಂಡಾಳ್ ವಂದಾಳ್; ಶೂಡಿಕ್ಕೊಡುತ್ತ
ಶುಡರ್ಕ್ಕೊಡಿ ವಂದಾಳ್;
ಕುರುಂಬಮರ್ ಕುಳಕೋರ್ದೈ ವಂದಾಳ್;
ತಿರುಪ್ಪಾವೈಪ್ಪಾಡಿಯ
ಶೆಲ್ವಿ ವಂದಾಳ್; ಪಟ್ಟರ್ ಪಿರಾನ್ ಪುದಲ್ವಿ
ವಂದಾಳ್; ವೇಯಾರ್
ಕುಲ ವಿಳಕ್ಕು ವಂದಾಳ್; ತೆನ್ನರಂಗಂ
ತೊಳುಂ ಕೋತೈವಂದಾಳ್

ಎಂದು ಹೊಗಳಿ ಹಾಡಿ ಸ್ವಾಗತಿಸಿದರಂತೆ. ಇಂತಹ ಗೋದಾದೇವಿಯ ಪಾದಗಳು ನಮ್ಮನ್ನು ಸದಾ ರಕ್ಷಿಸಲಿ.

# ಬದರೀ ಕೇದಾರ ಕ್ಷೇತ್ರಗಳು

ಭಾರತದ ಉತ್ತರದಲ್ಲಿರುವ ಎತ್ತರವಾದ ಹಿಮಾಲಯ ಪರ್ವತಗಳಲ್ಲಿ ಬದರೀ ಕೇದಾರಗಳು ಅತ್ಯುನ್ನತವಾದ ಪುಣ್ಯಕ್ಷೇತ್ರಗಳಾಗಿವೆ. ಪರ್ವತ ಪ್ರಾಂತದ ಚತುರ್ಧಾಮಗಳಲ್ಲಿ ಇವು ಮೇಲ್ಮಟ್ಟವನ್ನು ಪಡೆದಿವೆ. ಗಂಗೋತ್ರಿ, ಯಮುನೋತ್ರಿಗಳು ನೆರೆಯಲ್ಲಿವೆ.

"ಬದರೀ ಸದೃಶಂ ತೀರ್ಥಂ ನ ಭೂತೋ ನ ಭಷ್ಯತಿ" ಎಂದು ಶ್ರೀ ಮಹಾದೇವರು ಪಾರ್ವತಿಗೆ ಹೇಳಿದ ಕಥೆಯನ್ನು ಭಗವಾನ್ ವಸಿಷ್ಠರು ಅರುಂಧತಿಗೆ 'ಬದರೀ ಮಹಾತ್ಮೆಯಲ್ಲಿ' ಹೇಳಿದ್ದಾರೆ. ಈ ಪುಣ್ಯಭೂಮಿಯು ದಟ್ಟವಾದ ಬದರೀ ವೃಕ್ಷಗಳಿಂದ ಶೋಭಿಸುತ್ತದೆ. ಇದರಿಂದ 'ಬದರೀ' ಎಂಬ ಹೆಸರು ಸಾರ್ಥಕವಾಗಿದೆ. ನರನಾರಾಯಣ ಪರ್ವತದಲ್ಲಿರುವ ಈ ಕ್ಷೇತ್ರದಲ್ಲಿ 'ಅಲಕನಂದಾ' ನದಿಯ ಅಸಾಧ್ಯ ಚಳಿಯ ಅನುಭವವಾಗುತ್ತದೆ.

ವಸುಧಾರಾ ತೀರ್ಥದಲ್ಲಿ ತಪಸ್ಸು ಮಾಡುತ್ತಿರುವ ದಕ್ಷಪುತ್ರಿಯರಿಗೆ ಅನುಗ್ರಹಿಸಿದ ಶ್ರೀಮನ್ನಾರಾಯಣನು ನರ ನಾರಾಯಣನ ರೂಪಧರಿಸಿ ಮೂರ್ತಿ ದೇವಿಯ ಮಗನಾಗಿ ಅವತರಿಸಿದನು. ಬದರೀಕಾಶ್ರಮದಲ್ಲಿ ಘೋರ ತಪಸ್ಸು ಮಾಡುತ್ತಿರುವ ಸಹಸ್ರ ಕವಚನೆಂಬ ದೈತ್ಯನು ದೇವತೆಗಳನ್ನು ಬಹಳ ಪೀಡಿಸುತ್ತಿದ್ದನು. ಅವನ ಸಂಹಾರಕ್ಕಾಗಿ ನರನಾರಾಯಣರು ಅವಿವಾಹಿತರಾಗಿ ಉಳಿದು ಕಾರ್ಯಸಿದ್ಧಿಗಾಗಿ ತಪಸ್ಸನ್ನು ಆಚರಿಸಬೇಕಾಯಿತು. ಅಲಕನಂದಾ ನದಿಯ ಪಶ್ಚಿಮಕ್ಕಿರುವ ಪರ್ವತ ಶಿಲೆಯ ಮೇಲೆ ಕುಳಿತು ತಪಸ್ಸು ಮಾಡಿದರು; ನಿತ್ಯಾವಿಯೋಗಿನಿಯಾದ ಲಕ್ಷ್ಮೀದೇವಿಯು ಬದರೀ ವೃಕ್ಷವಾಗಿ ಆಶ್ರಯ ಕೊಟ್ಟಳು. ನರನಾರಾಯಣರ ಸನ್ನಿಧಿಯಲ್ಲಿರುವ ಬದರೀ (ಬೋರೆ) ವೃಕ್ಷದಿಂದ ಇಲ್ಲಿಯ ಕ್ಷೇತ್ರಕ್ಕೆ ಈ ಹೆಸರು ಬಂದಿದೆ.

ಉತ್ತರ ಭಾರತದ ಅಷ್ಟ ಖಂಡಗಳಲ್ಲಿ ಒಂದಾದ ನಾರಾಯಣ ಪರ್ವತಕ್ಕೆ ಆದ್ಯಗುರು ಶಂಕರಾಚಾರ್ಯರು ಸಂಚಾರ ಮಾಡುತ್ತ ಬಂದರು. ಶ್ರೀ ಪ್ರಭು ನಾರಾಯಣನ ದರ್ಶನ ಪಡೆದರು. ಸಕಲ ಜನತೆಯ ಕಲ್ಯಾಣವನ್ನು ಅಪೇಕ್ಷಿಸುವ ಆಚಾರ್ಯರು ಪರಮಪಾವನೆಯಾದ ಅಲಕನಂದೆಯಲ್ಲಿ ಮಿಂದರು; ಗಂಗಾಸ್ತೋತ್ರ ಮಾಡಿದರು. ಪರಮಾತ್ಮನ ಸಂದೇಶದಂತೆ ನಾರದ ಕುಂಡದಲ್ಲಿ ಮುಳುಗಿ ಎದ್ದಾಗ ತಮ್ಮ ಕರಕಮಲದಲ್ಲಿ ಬಂದ ಮೂರ್ತಿಗಳನ್ನು ಬದರಿಯಲ್ಲಿ ಪ್ರತಿಷ್ಠಾಪಿಸಿದರು. ಮಂದಿರವನ್ನು ಕಟ್ಟಿಸಿದರು. ಶಂಖಚಕ್ರಗದಾಪದ್ಮ ವನಮಾಲೆಗಳಿಂದ ಭೂಷಿತನಾದ ಪೀತಾಂಬರಧಾರಿ ಶ್ರೀ ಮನ್ನಾರಾಯಣನು 'ಜಗತ್ ಕಲ್ಯಾಣವನ್ನು ಬಯಸುವ ನಿನ್ನ ಮನೋರಥವು ಪೂರ್ಣವಾಗುವುದು. ನೀನು ಇಲ್ಲಿಂದ ಕೇದಾರ ಕ್ಷೇತ್ರಕ್ಕೆ ಹೋಗು' ಎಂದನು. ಶಂಕರಾಚಾರ್ಯರು ಅಲ್ಲಿಂದ ಕೇದಾರಕ್ಷೇತ್ರಕ್ಕೆ ಹೋಗಿ, ಆ ಪುಣ್ಯಭೂಮಿಯನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿರುವುದರಿಂದ, ಅದಕ್ಕೂ ಬದರೀ ಕ್ಷೇತ್ರದಷ್ಟೇ ಮಹತ್ತ್ವವಿದೆ.

ಬದರೀನಾಥ ಮಂದಿರವು ಹರಿದ್ವಾರದಿಂದ ೩೧೦ ಕಿ.ಮೀ. ದೂರದಲ್ಲಿದ್ದು ೧೦೨೪೪ ಅಡಿ ಎತ್ತರದಲ್ಲಿದೆ. ಅತ್ಯಂತ ಪುರಾತನವಾದ ಮಂದಿರವು ಪೂರ್ವದಲ್ಲಿ ೪೫ ಅಡಿ ಎತ್ತರದ ಮೇಲೆ ಮಂದಿರ ಮುಖ್ಯ(ಸಿಂಹ)ದ್ವಾರವಿದೆ. ಮಹಾರಾಣಿ ಅಹಲ್ಯಾಬಾಯಿ ಹೋಳಕರ – ಇವಳು ಜೀರ್ಣೋದ್ಧಾರ ಮಾಡಿಸಿ ಬಂಗಾರದ ಕಳಶ ಕೂಡಿಸಿದಳಂತೆ ಮಂದಿರವು ಸುಂದರವಾದ ಕಲ್ಲು ಫರಸಿಯಿಂದ ಅಲಂಕೃತವಾಗಿದೆ. ಪ್ರಾಕಾರದಲ್ಲಿ ಅನೇಕ ಮಂದಿರಗಳಿವೆ. ಮುಖ್ಯ ಮಂದಿರದ ನೆರೆಯಲ್ಲಿಯೇ ಶ್ರೀ ಲಕ್ಷ್ಮೀದೇವಿಯ ಮಂದಿರ, ಭೋಗ ಮಂದಿರಗಳಿವೆ. ಭೋಗಮಂದಿರದಿಂದಲೇ ಪರಮಾತ್ಮನಿಗೆ ನಿತ್ಯ ನೈವೇದ್ಯ ಹೋಗುವುದು. ಮಂದಿರದ ಎದುರುಗಡೆ ಗರುಡ ವಿಗ್ರಹವಿದೆ. ಸಮೀಪದಲ್ಲಿ ಕೆಂಪು ಮಾರುತಿ ಕಂಗೊಳಿಸುತ್ತಿದೆ. ಪವಿತ್ರವಾದ ಗರ್ಭಗುಡಿಯ ಮಧ್ಯದಲ್ಲಿ ಪೀಠದ ಮೇಲೆ ಸಾಲಿಗ್ರಾಮ ಶಿಲೆಯಿಂದ ಶೋಭಿಸುವ ಪದ್ಮಾಸನದಲ್ಲಿ ಕುಳಿತಿರುವ ಶ್ರೀ ಮನ್ನಾರಾಯಣ ಮೂರ್ತಿಯೇ ಬದರೀನಾಥನು.

ಯೋಗಾಸನದಲ್ಲಿ ಚತುರ್ಭುಜನಾಗಿ ಶಂಖ ಚಕ್ರ ಗದಾ ಪದ್ಮಗಳಿಂದ ಮಂಡಿತನಾದ ಪೀತಾಂಬರಧಾರಿಯಾದ ಕನಕಾಭರಣಗಳಿಂದ ಭೂಷಿತನಾದ ಬದರೀನಾಥನನ್ನು ಕಂಡಾಗ ಶ್ರಮ ಸಾರ್ಥಕವಾಗಿ ಧನ್ಯತೆ ಒಡಮೂಡುವುದು. ಬದರೀ ಪಂಚಾಯತದಲ್ಲಿ ಎಡಕ್ಕೆ ನರನಾರಾಯಣ ಬಲಕ್ಕೆ ಕುಬೇರ, ಗಣಪರ ವಿಗ್ರಹಗಳಿವೆ. ಕೆಳಗೆ ಗರುಡ, ಉದ್ಧವ, ನಾರದರ ಮೂರ್ತಿಗಳಿವೆ. ಪ್ರತಿದಿನ ಮುಂಜಾನೆ ವಿಶ್ವರೂಪ ದರ್ಶನವಾಗುತ್ತದೆ. ಮಧ್ಯಾಹ್ನ ಹಾಗೂ ಸಾಯಂಕಾಲಗಳಲ್ಲಿ 'ಶೃಂಗಾರ ದರ್ಶನ' ವಾಗುವುದು. ಶ್ರೀ ಬದರೀನಾರಾಯಣನನ್ನು ಕಣ್ತುಂಬ ಭಕ್ತಿಭಾವದಿಂದ ನೋಡಿದವರೇ ಧನ್ಯರು.

ಹಸ್ತ ದ್ವಂದ್ವ ಗದಾ ಶಂಖ ಚಕ್ರ ರುಚಿರಂ
ವೃತ್ತೋರು ಮಧ್ಯ ಸ್ಫುರಸ್ ।
ರಕ್ತೋತ್ತಾ ನಕ ಶಾರ ವಿಂದಯುಗಲಂ
ಪದ್ಮಾಸ ನಸ್ಥಂ ಪ್ರಭುಂ ॥

**ಶ್ರೀ ಭೀಮಾಚಾರ್ಯ ಗುಡಿ**

ವಿಶ್ವಜನಾದರ ಮುಖ್ಯಯೋಗಿ ನಿಕರೈಃ
ಸಂಸೇವ್ಯಮಾನಂ ಸುಸಾ ।
ವೀಕ್ಷಾ ಕ್ಷಾಲಿತ-ಭಕ್ತ ಕಿಲ್ಬಿಷ ವಿಷಂ
ನಾರಾಯಣಂ ಚಿಂತಯೇ ॥

ಮೇಲಿನ ಎರಡು ಕೈಗಳಲ್ಲಿ ಶಂಖ ಚಕ್ರಗಳಿಂದ ಮನೋಹರವಾದ ದುಂಡಗಿರುವ ತೋಳುಗಳಿಂದ ಶೋಭಿಸುವ, ಮೇಲ್ಮುಖವಾದ ಕೆಂಪುಕರಕಮಲಗಳುಳ್ಳ ಪದ್ಮಾಸನದಲ್ಲಿ ಕುಳಿತಿರುವ ಸಮರ್ಥನಾದ ನಾರದರೇ ಮೊದಲಾದ ಯೋಗಿಗಳಿಂದ ಸೇವಿಸಲ್ಪಡುತ್ತಿರುವ, ಅಮೃತ ಮಯವಾದ ಕಣ್ಣು ನೋಟದಿಂದ ಭಕ್ತರ ಪಾಪಗಳೆಂಬ ವಿಷಯವನ್ನು ತೊಳೆಯುವ ಶ್ರೀ ಬದರೀ ನಾರಾಯಣನನ್ನು ಧ್ಯಾನಿಸುತ್ತೇನೆ–ಎಂದು ವಾದಿರಾಜರು ತೀರ್ಥ ಪ್ರಬಂಧದಲ್ಲಿ ವರ್ಣಿಸಿದ್ದಾರೆ, ನಾರದ, ಗರುಡ, ಉದ್ಧವ, ಕುಬೇರ, ಗಣೇಶ, ಲಕ್ಷ್ಮಿಯರಿಂದ ಸೇವಿತನಾದ ಬದರೀ ನಾರಾಯಣನು ಸಮಸ್ತ ಪರಿಪೂರ್ಣಗುಣನಾಗಿರುವುದರಿಂದ ನಮಗೆ ಜ್ಞಾನಾನಂದಾದಿ ಗುಣಗಳನ್ನು ದಯಪಾಲಿಸಲಿ ಎಂದು ಪ್ರಾರ್ಥಿಸಿದ್ದಾರೆ. ಯಾವ ನಾರಾಯಣನು ಧರ್ಮ ಪ್ರಜೇಶ್ವರನಿಂದ ಪ್ರಾದುರ್ಭವಿಸಿದನೋ, (ಅವತರಿಸಿದನೋ) ಅವನು ನಮಗೆ ಧರ್ಮ ಬುದ್ಧಿಯನ್ನು ಕೊಡಲಿ, ನಾರಾಯಣನು ತಪಸ್ವೀ ಹಾಗೂ ಯೋಗಾಭ್ಯಾಸ ನಿರತನಾಗಿರುವುದರಿಂದ ತನ್ನ ವಿಷಯಕವಾದ ಧ್ಯಾನ ಸಂಪತ್ತು ಕೊಡಲಿ. ಯಾವ ನಾರಾಯಣನು ಮನ್ಮಥನ ಮದವನ್ನು ಹೋಗಲಾಡಿಸಿದನೋ ಅವನು ವಿಜಯವನ್ನು ಕೊಡಲಿ. ಯಾವನು ಎತ್ತರವಾದ ಪರ್ವತದಲ್ಲಿ ನೆಲೆಸಿದ್ದಾನೋ ಅವನು ಯಾವಾಗಲೂ ನಮಗೆ ಉಚ್ಚಪದವಿ (ಮೋಕ್ಷ)ವನ್ನು ದಯಪಾಲಿಸಲಿ. ಊರ್ವಶಿಯ ತಂದೆಯಾದ ನಾರಾಯಣನು ಎಲ್ಲ ಹೆಂಗಸರಲ್ಲಿಯೂ ಔರಸಪುತ್ರಿಯಂತೆ ಭಾವನೆ (ಪ್ರೀತಿ) ಕೊಡಲಿ (ಎಲ್ಲ ಸುಂದರಸ್ತ್ರೀಯರು ಊರ್ವಶಿಯಂತೆ ಪರಮಾತ್ಮನಿಗೆ ಪುತ್ರಿಸಮಾನರು). ಸಮಸ್ತ ಗುಣ ಪರಿಪೂರ್ಣನಾಗಿರುವುದರಿಂದ ನಮಗೆ ಒಳ್ಳೆಯ ಗುಣಗಳನ್ನು (ಜ್ಞಾನಾನಂದಾದಿಗುಣಗಳನ್ನು) ದಯಪಾಲಿಸಲಿ ಎಂದು ವಾದಿರಾಜರು ಶ್ರೀ ಬದರೀನಾರಾಯಣನನ್ನು ವರ್ಣಿಸಿ ಪ್ರಾರ್ಥಿಸಿದ್ದಾರೆ. ಶ್ರೀ ಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿಸಿದ್ದಾರೆ.

ಬದರೀ ಕ್ಷೇತ್ರದಲ್ಲಿ ನಾಲ್ಕು ಪ್ರಕಾರಗಳು 1. ಸ್ಥೂಲ 2. ಸೂಕ್ಷ್ಮ 3. ಅತಿಸೂಕ್ಷ್ಮ 4. ಶುದ್ಧ. ಇವು ಚತುರ್ವಿಧ ಪುರುಷಾರ್ಥಗಳಂತೆ ಧರ್ಮ-

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಛಾಯಾ ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಿನ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್ ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚೀನ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನು ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು ಸ್ಪಷ್ಟ ಭಾವಚಿತ್ರಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ತು ಮೊದಲಾದ ಶೀರ್ಷಿಕೆಗಳಿಗೆ ಸಣ್ಣಕತೆ, ಕಥೆ, ಪ್ರಬಂಧಗಳನ್ನು ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

---

ಅರ್ಥ, ಕಾಮ, ಮೋಕ್ಷಾದಿಗಳ ಫಲಕೊಡುವವು. ಇಲ್ಲಿ ದೀಪದಾನ ಮಾಡುವುದರಿಂದ, ಸೇವಾಸೂಕ್ತಾದಿಗಳ, ತೀರ್ಥವಿಧಿಗಳ ಆಚರಣೆಯಿಂದ ಸರ್ವ ಪಾಪನಾಶವಾಗುವುದು. ಮನಸ್ಸು ನಿರ್ಮಲವಾಗಿ ಏಕಾಗ್ರವಾಗುವುದು. ಪುಣ್ಯಕ್ಷೇತ್ರವಾದ ಬದರಿಯ ಸ್ಮರಣ, ದರ್ಶನ, ಸ್ಪರ್ಶಮಾತ್ರದಿಂದ ಜನ್ಮ ಫಲವಾಗುವುದು. ಬದರಿ ಪುರಿಗೆ 'ಕಲಿಮಲನಾಶಿನಿ' ಹಾಗೂ 'ಪಾಪವಿಮೋಚನಿ' ಎಂದು ಕರೆದಿದ್ದಾರೆ. ಬದರೀದರ್ಶನಾದೇವ ಮುಕ್ತಾಃ ಪುಂಸಾಂ ಕರೇಸ್ಥಿತಾ–ಎಂದು ಮಹಾಭಾರತದಲ್ಲಿ ಹೇಳಲಾಗಿದೆ. ಶ್ರೀ ಬದರೀ ಪಾದಯಾತ್ರೆಯಿಂದ ಚರಣಗಳು ಪಾವನವಾಗುವವು. ಬದರೀ ದರ್ಶನದಿಂದ ನಯನಗಳು ಪಾವನವಾಗುವವು. ಬದರೀ ನಾಮ ಸ್ಮರಣೆಯಿಂದ ನಾಲಿಗೆಯು ಪವಿತ್ರವಾಗುವುದು. ಶ್ರವಣದಿಂದ ಕಿವಿಗಳು ಪುನೀತವಾಗುವವು. ಒಟ್ಟಾರೆ ಬದರೀ ನಾಥನ ಅನುಗ್ರಹದಿಂದ ಸರ್ವಪಾಪಗಳು ನಾಶವಾಗಿ ಮಾನವನು ಸಾರೂಪ್ಯ, ಸಾಲೋಕ್ಯ, ಸಾಯುಜ್ಯ ಮುಕ್ತಿಯನ್ನು ಪಡೆಯುವನು

ಮಂದಿರದ ಸಮೀಪದಲ್ಲಿ ಅಲಕನಂದೆಯ ತೀರದಲ್ಲಿ ಕರ್ಣಧಾರಾ, ಪ್ರಹ್ಲಾದ ಧಾರಾ, ತಪ್ತಕುಂಡ ಸೂರ್ಯಕುಂಡ, ನಾರಾಯಣಕುಂಡ ಹಾಗೂ ಊರ್ವಶಿ ಕುಂಡಗಳೆಂಬ ಏಳು ಕುಂಡಗಳಿವೆ. ಸರ್ವ ಭಕ್ಷಕನಾದ ಅಗ್ನಿಯು ತನ್ನ ಪಾಪಗಳನ್ನು ಕಳೆದು ಕೊಳ್ಳುವುದಕ್ಕಾಗಿ ಈ ಕ್ಷೇತ್ರಕ್ಕೆ ಬಂದು ಶ್ರೀ ಬದರೀ ನಾರಾಯಣನಿಗೆ ಮೊರೆ ಹೊಕ್ಕನು. ಆತನ ಅನುಗ್ರಹದಂತೆ ಪಾಪ ಪರಿಹಾರಕ್ಕಾಗಿ ತಪ್ತ ಕುಂಡದಲ್ಲಿ ವಾಸವಾದನು. ಇಲ್ಲಿಯೇ ಶ್ರೀ ಬದರೀ ನಾಥನ ಹಾಗೂ ಇತರ ವಿಗ್ರಹಗಳು ದೊರಕವೆಂದು ಪುರಾಣೋಕ್ತಿಯಿದೆ. ಅನುಗ್ರಹೀತನಾದ ಅಗ್ನಿಯು ಇಲ್ಲಿ ಸ್ನಾನಮಾಡಿದ ಭಕ್ತರ ದೇಹ ಚಿತ್ತಗಳನ್ನು ಶುದ್ಧಗೊಳಿಸುವನು. ಸೂರ್ಯಕುಂಡ, ನಾರದೀಯ ಕುಂಡಗಳಲ್ಲಿ ಸ್ನಾನ ಮಾಡಿದವರಿಗೆ ಪುನರ್ಜನ್ಮವಿಲ್ಲ. ಬದರಿಯಲ್ಲಿ ನಾರದಶಿಲಾ, ನರಸಿಂಹ ಶಿಲಾ, ಮಾರ್ಕಂಡೇಯ ಶಿಲಾ, ಗರುಡ ಶಿಲಾ, ಮತ್ತು ಕುಬೇರ ಶಿಲಾ, ಎಂಬ ಪಂಚ ಶಿಲೆಗಳಿವೆ. ನಾರದರು ತಪಸ್ಸು ಮಾಡಿದ ಶಿಲೆಯು ನಾರದಶಿಲೆ, ನರಹರಿ ನಾರಸಿಂಹರು ಕೋಪಶಮನ ಮಾಡಿ ಕೊಂಡ ಶಿಲೆಯು ನಾರಸಿಂಹ ಶಿಲೆ, ಮಾರ್ಕಂಡೇಯರು ತಪಸ್ಸು ಮಾಡಿದ್ದು ಮಾರ್ಕಂಡೇಯ ಶಿಲೆಯಲ್ಲಿ. ಗರುಡ ಶಿಲಾದರ್ಶನ, ಗರುಡ ಗಂಗಾಸ್ನಾನ ಮಾಡಿದವರಿಗೆ ಸರ್ಪಭಯವಿಲ್ಲ. ಮಂದಿರದ ಉತ್ತರಕ್ಕೆ ಸ್ವಲ್ಪ ದೂರದಲ್ಲಿ 'ಬ್ರಹ್ಮ ಕಪಾಲ' ವಿದೆ. ಬ್ರಹ್ಮನ ಸಾನಿಧ್ಯವಿರುವ ಈ ಸ್ಥಳದಲ್ಲಿ ಯಾತ್ರಿಕರು ಪಿತೃಗಳ ಉದ್ದಿಶ್ಯವಾಗಿ ಪಿಂಡಶ್ರಾದ್ಧ ಮಾಡುವರು. ಇಲ್ಲಿ ಮಾಡುವ ಪಿಂಡದಾನ ಹಾಗೂ ತರ್ಪಣಗಳಿಂದ ಪಿತೃಗಳಿಗೆ ಪರಮಪದ ಪ್ರಾಪ್ತಿಯಾಗುವುದೆಂಬ ಶ್ರದ್ಧಾಯುಕ್ತ ಸಂಪ್ರದಾಯವು ಭಾರತೀಯರಲ್ಲಿ ಬೆಳೆದು ಬಂದಿದೆ. ಬ್ರಹ್ಮನ ಐದನೆಯ ತಲೆ (ಮಹಾದೇವರು ಕತ್ತರಿಸಿದ್ದು) ಯೇ ಬ್ರಹ್ಮಕಪಾಲವಾಗಿದೆಯೆಂದು ಪುರಾಣಗಳಲ್ಲಿ ಕಥೆಯಿದೆ.

ಶ್ರೀಮನ್ಮಧ್ವಾಚಾರ್ಯರು ಎರಡು ಸಲ ಬದರಿಗೆ ಬಂದು ಬದರೀನಾಥನ ಸನ್ನಿಧಾನದಲ್ಲಿ ವೇದವ್ಯಾಸರ ದರ್ಶನ ಪಡೆದರು, ಅವರಿಂದ ಅನುಗ್ರಹೀತರಾಗಿ ಬ್ರಹ್ಮಸೂತ್ರಭಾಷ್ಯ ಬರೆದರೆಂದು 'ಮಾಧ್ಯ ಸ್ಮೃತಿ' ಮೊದಲಾದ ಗ್ರಂಥಗಳಿಂದ ತಿಳಿಯುವುದು. ಮಹಾಂತರೆಂದು ಕರೆಯಿಸಿಕೊಳ್ಳುವ ಸನ್ಯಾಸಿಗಳೇ ಇಲ್ಲಿ ಪೂಜೆಮಾಡುತ್ತಿದ್ದರು. ಈಗ ಬ್ರಹ್ಮಚಾರಿಗಳಾದ ನಂಬೂದ್ರಿ ಬ್ರಾಹ್ಮಣರು (ರಾವಳರು) ವೈಭವದೊಂದಿಗೆ ಬದರೀನಾಥನನ್ನು, ಅಲಂಕರಿಸಿ ಪೂಜಿಸುವರು.

ಬದರೀ ನಾಥನ ಮಂದಿರವು ಹಿಮವಸ್ತ್ರ ಮುಚ್ಚಿರುವಾಗ ಶ್ರೀ ಬದರೀ ನಾರಾಯಣ ಉತ್ಸವ ಮೂರ್ತಿಗಳನ್ನು 'ಜೋಶಿಮಠದಲ್ಲಿ' ತಂದು ಇಡುವರು. ಇಲ್ಲಿಯೇ ಸಮೀಪದಲ್ಲಿ ಜ್ಯೋತೀಶ್ವರ ಮಹಾದೇವನ ಮಂದಿರವಿದ್ದು ಅಲ್ಲಿಯೇ ಶಂಕರಾಚಾರ್ಯರ ನಿವಾಸವಿತ್ತೆಂದು ಹೇಳುತ್ತಾರೆ. ಅವರು ಸ್ಥಾಪಿಸಿದ ಜ್ಯೋತಿರ್ಮಠವು ಇಲ್ಲಿಯೇ ಇದೆ. ಯಾತ್ರಿಕರು ಅನುಕೂಲವಾದ ಮಠದಲ್ಲಿ ಇಳಿದು ಕೊಂಡು ಚಳಿಯನ್ನು ತಡೆಯುವುದಕ್ಕಾಗಿ ಉಣ್ಣೆ ಬಟ್ಟೆಗಳನ್ನು ಧರಿಸಿ ಶ್ರೀಬದರೀ ನಾಥನ ದರ್ಶನ ಪಡೆಯುವರು. ಬ್ರಹ್ಮಕಪಾಲದಲ್ಲಿ ಪಂಡಾಗಳ ಹೇಳಿಕೆಯಂತೆ ಪಿಂಡಪ್ರದಾನ ಶ್ರಾದ್ಧ ಮಾಡುವರು. ಹೀಗೆ ಪುಣ್ಯಪ್ರದವಾದ ನಿಸರ್ಗರಮಣೀಯವಾದ ಬದರೀ ಕ್ಷೇತ್ರವನ್ನು ಬಿಡಲಾರದ ಮನಸ್ಸಿನಿಂದ ಬಿಟ್ಟು, ಜೋಶಿ ಮಠ, ಚಮೋಲಿ, ನಂದ ಪ್ರಯಾಗ, ಕರ್ಣ ಪ್ರಯಾಗಗಳ ಮೇಲೆ ಹಾದು ರುದ್ರ ಪ್ರಯಾಗಕ್ಕೆ ಬಸ್ಸಿನಿಂದ ಸಾಗುವರು. ಭಕ್ತಿ ಪೂರಿತ ವಾತಾವರಣ, ಆಕರ್ಷಕ ಜಲ ನೀರುಗಳ ಅನುಭವದಿಂದ ಆನಂದಿತನಾದ ಭಕ್ತನು ದಣಿವೆಯಿಂದ ಕೂಡಿದ ಪಟ್ಟಣಗಳಿಗೆ ಬರುವನು

ಗಂಗಾದ್ವಾರದಿಂದ ಬೌದ್ಧಾಚಲದವರೆಗೆ ಇರುವ 50 ಯೋಜನ ಉದ್ದ, 30 ಯೋಜನ ಅಗಲ ಇರುವ ಪರ್ವತ ಪ್ರಾಂತದಲ್ಲಿ (ಸ್ವರ್ಗದ್ವಾರದಲ್ಲಿ) 'ಕೇದಾರ ಮಂಡಲ' ವಿದೆ. ಇಲ್ಲಿ ಅನೇಕ ತೀರ್ಥಗಳಿವೆ, ನೂರಾರು ಶಿವಲಿಂಗಗಳಿವೆ ಮಂದಾಕಿನಿ ನದಿಯು ನಾನಾ ರೀತಿಯಲ್ಲಿ ಹರಿಯುತ್ತಿದೆ. ನಿಸರ್ಗ ಸುಂದರವಾದ ವನಗಳಿವೆ ಅನೇಕ ಋಷಿ, ಮುನಿಗಳಿಗೆ ತಪೋಭೂಮಿಯಾದ ಈ ಪ್ರದೇಶವು 'ಪುಣ್ಯ ಪೀಠ'ವಾಗಿದೆ.

ಸ್ವರ್ಗ ಮತ್ತು ಮೋಕ್ಷ ಪ್ರದವಾದ ಕೇದಾರ ಧಾಮವು ಅತ್ಯಂತ ಪುರಾತನವೂ ಅತಿಪ್ರಿಯವೂ ಆದ ಕ್ಷೇತ್ರವಾಗಿದೆಯೆಂದು ಪ್ರೇಯಸಿ ಪಾರ್ವತಿಗೆ

ಮಹಾದೇವರು ಹೇಳಿದ್ದು. ಪುರಾಣೋಕ್ತ ಭಾರತೀಯರ ಶ್ರದ್ಧಾ ಭಕ್ತಿಗಳ ಕೇಂದ್ರವಾದ ಈ ಮಹಾಕ್ಷೇತ್ರಕ್ಕೆ ಪೌರಾಣಿಕ ಮಹತ್ತ್ವವಿದೆ.

1. ಕೇದಾರ ದರ್ಶನ, ಸ್ಪರ್ಶನಗಳು ಮೋಕ್ಷದಾಯಕವಾಗಿವೆ. (ಪದ್ಮಪುರಾಣ, ವಾಮನ ಪುರಾಣಗಳು)

2) ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಕೇದಾರೇಶ್ವರನ ದರ್ಶನವನ್ನು ಯಾವನು ಮಾಡಿಲ್ಲವೋ ಅವನ ಜನ್ಮ ವ್ಯರ್ಥ (ಶಿವಪುರಾಣ)

3) ಯಾವ ಮನುಷ್ಯನು ಸನ್ಯಾಸ ಸ್ವೀಕರಿಸಿ ಕೇದಾರನಿವಾಸಿಯಾಗುವನೋ ಅವನು ಶಿವಸ್ವರೂಪವನ್ನು ಪಡೆಯುವನು (ಲಿಂಗಪುರಾಣ)

4) ಪಾಪಗಳು ನಾಶವಾಗಿ ಶಿವರೂಪ ಪಡೆಯುವ ಮಹಾ ಪಥವು ಕೇದಾರ ದರ್ಶನವು (ಸ್ಕಂದಪುರಾಣ)

5) ಕೇದಾರ ತೀರ್ಥವು ಸರ್ವಪಾಪಗಳನ್ನು ನಾಶ ಗೊಳಿಸುವದು (ಗರುಡ ಪುರಾಣ)

6) ಹಿಮಾಲಯದ ತೀರ್ಥಗಳ ಸ್ನಾನದಿಂದ ಮತ್ತು ಕೇದಾರ ದರ್ಶನದಿಂದ ರುದ್ರಲೋಕ ಪ್ರಾಪ್ತಿಯಾಗುವುದು. (ಕೂರ್ಮಪುರಾಣ)

7) ಕೇದಾರ ತೀರ್ಥಗಳಲ್ಲಿ ಸ್ನಾನಮಾಡಿ, ಕೇದಾರೇಶ್ವರನ ದರ್ಶನ ಪಡೆದ ಮಾನವನು ಗಣಗಳ ರಾಜನಾಗುವನು (ಸೌರಪುರಾಣ)

8) ಕೇದಾರ ಕುಂಡಗಳಲ್ಲಿ ಸ್ನಾನಮಾಡುವ್ದರಿಂದ ಮಾನವ ಪಾಪಗಳು ನಾಶವಾಗುವವು. ಪಾಂಡವರು ಗೋತ್ರ ಹತ್ಯಾದೋಷವನ್ನು ಇಲ್ಲಿಯೇ ಕಳೆದು ಕೊಂಡರು. (ಮಹಾಭಾರತ, ವನಪರ್ವ)

ಮಹಾಭಾರತ ಯುದ್ಧದನಂತರ ಪಾಂಡವರಿಗೆ ಗೋತ್ರ ಹತ್ಯಾ ದೋಷವು ಬಂದಿತು. ಇದರ ನಿವಾರಣೆಗಾಗಿ ಕೇದಾರಕ್ಕೆ ಬಂದು ಮಹಾದೇವರನ್ನು ಕಂಡರು. ಅವರನ್ನು ತಪ್ಪಿಸುವುದಕ್ಕಾಗಿ ಮಹಾದೇವರು ಮುಂದೆ ಮುಂದೆ ಓಡಹತ್ತಿದರು. ಪಾಂಡವರು ಬೆನ್ನು ಹತ್ತಿದರು. ಆಗ ಮಹಾದೇವರು ಮಹಿಷರೂಪ ಧರಿಸಿ ಭೂಮಿಯಲ್ಲಿ ಅಡಗುತ್ತಿರುವಾಗ ಅವರು ಮಹಿಷದ ಮೇಲ್ಭಾಗ (ಬೆನ್ನು) ಯನ್ನು ಮುಟ್ಟಿದರು. ಅಷ್ಟೇ ಭಾಗವು ಭೂಮಿಯಲ್ಲಿ ಉಳಿದು ಇಂದಿನ 'ಕೇದಾರೇಶ್ವರ ವಾಯಿತೆಂದು ಶೈವ ಪುರಾಣದಲ್ಲಿ ಹೇಳಿದ್ದಾರೆ. ಇದನ್ನು ಮುಟ್ಟಿದ ಪಾಂಡವರು ಸ್ವರ್ಗಲೋಕಕ್ಕೆ ಹೋದರು. ಇದು ಕೇದಾರ ಕ್ಷೇತ್ರದ ಮಹಾತ್ಮ್ಯೆ.

ಆದಿ ಶಂಕರಾಚಾರ್ಯರು ಚಿಕ್ಕವಯಸ್ಸಿನಲ್ಲಿಯೇ ತೀರ್ಥ ಯಾತ್ರೆ ಮಾಡುತ್ತ ಇಲ್ಲಿಯೇ ಆಗಮಿಸಿದ್ದರು. ಕೇದಾರೇಶ್ವರನ ಸನ್ನಿಧಾನದಲ್ಲಿ ಬ್ರಹ್ಮಸೂತ್ರ ಉಪನಿಷತ್ತು, ಭಗವದ್ಗೀತೆ (ಪ್ರಸ್ಥಾನತ್ರಯ) ಗಳಿಗೆ ಭಾಷ್ಯ ಬರೆದರು. ಸನಾತನ (ಅದ್ವೈತ) ಧರ್ಮ ತತ್ತ್ವ ಪ್ರಸಾರಕ್ಕಾಗಿ ತಳಹದಿ ಹಾಕಿದರು. ದಶನಾಮೀ ಪದ್ಧತಿಯ ಸಂಚಾರೀ ಸನ್ಯಾಸಿಗಳ ಬಳಗ ಕಟ್ಟಿದರು. ಧರ್ಮ ಪ್ರಸಾರದ ಕಾರ್ಯ ಮಾಡುತ್ತ ತಮ್ಮ 42ನೆಯ ವಯಸ್ಸಿನಲ್ಲಿಯೇ ಗುಹಾ ಪ್ರವೇಶ ಮಾಡಿದರು. ಇವರ ಸಮಾಧಿಯು ಕೇದಾರೇಶ್ವರ ಮಂದಿರದ ಹಿಂಭಾಗದಲ್ಲಿದೆ. ಹಿಮಾಲಯವು ಅನೇಕ ನದ ನದಿಗಳಿಗೆ ಜನ್ಮಸ್ಥಾನವಾದಂತೆ ಸನಾತನ ಧರ್ಮದ ಪುನರುದ್ಧಾರ ಹಾಗೂ ಪ್ರಸಾರದ ಉಗಮವು ಇಲ್ಲಿಯೇ ಆಯಿತೆಂದು ಹೇಳುವರು.

ಕೇದಾರಕ್ಕೆ ಹರಿದ್ವಾರದಿಂದ ರುದ್ರಪ್ರಯಾಗ, ಗುಪ್ತಕಾಶಿ, ಸೋನ ಪ್ರಯಾಗಗಳ ಮೂಲಕ ಗೌರೀ ಕುಂಡಕ್ಕೆ ಬಸ್ಸಿನಿಂದ ಮಂದಾಕಿನಿ ನದಿಯ ಗುಂಟ ಬರುವರು. ಕೇದಾರ ಯಾತ್ರಿಕರಿಗೆ ಗೌರೀ ಕುಂಡವು ಒಂದು ಕೇಂದ್ರ ಸ್ಥಳವಾಗಿದೆ. ಇಲ್ಲಿ ಗೌರೀದೇವಿಯ ಮಂದಿರವಿದ್ದು, ಶೀತ ಉಷ್ಣ ಕುಂಡಗಳಿವೆ. ಪಾರ್ವತಿಯು ಇಲ್ಲಿಯೇ ತಪಸ್ಸು ಮಾಡಿ ಮರು ಜನ್ಮ ಪಡೆದಳೆಂದು ಕಥೆಯಿದೆ. ಯಾತ್ರಿಕರು ಈ ಕುಂಡಗಳಲ್ಲಿ ಸ್ನಾನಮಾಡಿ ಗೌರೀದೇವಿಯ ದರ್ಶನ ಪಡೆದು 14 ಕಿ. ಮೀ. ಎತ್ತರದಲ್ಲಿರುವ ಕೇದಾರೇಶ್ವರನ ಮಂದಿರಕ್ಕೆ ಸಾಗುವರು. ಇಲ್ಲಿಂದ ಹೋಗುವುದು ಕಷ್ಟದಾಯಕವಾದರೂ, ಡೋಲಿ, ಕುದುರೆ, ಹಾಗೂ ಕಂಡಿಗಳಲ್ಲಿ ಬಾಡಿಗೆಕೊಟ್ಟು, ಪ್ರಯಾಣ ಮಾಡುವರು. ಅನೇಕ ಭಕ್ತರು ಕೋಲೂರುತ್ತಾ ಕಾಲ್ನಡಿಗೆಯಿಂದಲೂ ಯಾತ್ರೆಮಾಡುವರು. ಈ ಎಲ್ಲರ ಸೌಕರ್ಯಕ್ಕಾಗಿ ದಾರಿಯಲ್ಲಿ ಚಟ್ಟಿ, (ವಿಶ್ರಾಂತಿ–ಗೃಹ) ಗಳಿವೆ. ಒಂದು ಕಡೆ ಇಕ್ಕಟ್ಟಾದ ಗುಡ್ಡ ಇನ್ನೊಂದೆಡೆಗೆ ಅಬ್ಬರದಿಂದ ಹರಿದು ಬರುವ ನದಿ, ಏರು ಪೇರುಗಳಿಂದ ಕೂಡಿದ ದಾರಿಗಳು ಭಯವನ್ನುಂಟು ಮಾಡುತ್ತಿದ್ದರೂ ದರ್ಶನ ಸಂಭ್ರಮದಿಂದ ಎಲ್ಲವನ್ನೂ ಮರೆತು ಯಾತ್ರಿಕರು ಉತ್ಸುಕರಾಗಿ ಸಾಗುವರು. ಬೋಲೋ ಕೇದಾರನಾಥಕೀ ಜಯ–ಎಂದು ಘೋಷಿಸುತ್ತ ಕೈಮುಗಿಯುವರು. 11760 ಅಡಿ ಎತ್ತರವಾದ ಕೇದಾರಕ್ಕೆ ಬಂದು ಎಡಬಲಕ್ಕಿರುವ ಅಂಗಡಿಗಳ ಮಧ್ಯದಲ್ಲಿ ಹಾದು ಕೇದಾರೇಶ್ವರ ಮಂದಿರಕ್ಕೆ ಬಂದು, ಪ್ರಸಾದದ ತಟ್ಟೆಗಳನ್ನು ತೆಗೆದು ಕೊಂಡು ದರ್ಶನಕ್ಕಾಗಿ ಸರದಿಯಲ್ಲಿ ನಿಲ್ಲುವರು. ದರ್ಶನ ಪಡೆದು ಧನ್ಯರಾಗುವರು.

ಶ್ರೀ ಕೇದಾರನಾಥ ವಿಗ್ರಹವು ಸಾಮಾನ್ಯ ಲಿಂಗಗಳಂತೆ ಇರದೆ ಪರ್ವತಾಕಾರದಲ್ಲಿದೆ. ಮಹಿಷದ ಎಣೆಯಂತಿದ್ದ ಭಾಗವು ಕೇದಾರದಲ್ಲಿ, ನಾಭಿ ಅಂಶದಿಂದ 'ಮಧ್ಯಮೇಶ್ವರ', 'ಬಾಹು' ಅಂಶದಿಂದ ತುಂಗನಾಥದಲ್ಲಿ, ಮುಖ ಅಂಶದಿ ರುದ್ರನಾಥದಲ್ಲಿ, ಜಟಾ ಅಂಶದಿಂದ ಕಲ್ಪೇಶ್ವರದಲ್ಲಿ –ಶಿವನು ಸನ್ನಿಹಿತನಾಗಿದ್ದಾನೆಂದು ಹೇಳುತ್ತಾರೆ. ಈ ಪಂಚ ಕೇದಾರಗಳು ಗಢವಾಲ ಜಿಲ್ಲೆಯಲ್ಲಿವೆ. ಕೇದಾರನಾಥದ ಹಿಂದಿನ ಭಾಗವು ನೇಪಾಳದ ಪಶುಪತಿ ನಾಥ ದೇವಾಲಯದಲ್ಲಿದೆ ಎಂದು ಹೇಳುತ್ತಾರೆ. ಕೇದಾರಲಿಂಗವು ಸ್ವಯಂಭೂ ಮೂರ್ತಿಯಾಗಿದೆ. ಮಂದಿರದ ಎದುರು ಸುಂದರವಾದ ಮಂಟಪವಿದೆ. ದ್ರೌಪದೀಸಹಿತ ಪಂಚಪಾಂಡವರ ಮೂರ್ತಿಗಳಿವೆ. ಮುಖ್ಯದ್ವಾರದ ಎಡಬಲಗಳಲ್ಲಿ ದ್ವಾರಪಾಲಕರಿದ್ದಾರೆ. ಸಂಧ್ಯಾಕಾಲಗಳಲ್ಲಿ ಮಹಾಪೂಜೆ, ಅಭಿಷೇಕ, ಮಂಗಳಾರತಿಗಳು ನಡೆಯುವುವು, ಅಲಂಕಾರವು ಚಿತ್ತಾಕರ್ಷಕ ವಾಗಿರುತ್ತದೆ.

ಮಂದಿರದ ಪ್ರದಕ್ಷಿಣೆಯಲ್ಲಿ ಅನೇಕ ಕುಂಡಗಳು, ದೇವಾಲಯಗಳು ಗೋಚರವಾಗುವವು. ಮಂದಿರದ ಹಿಂಭಾಗದಲ್ಲಿ ಅಮೃತ ಕುಂಡವಿದೆ– ಪೂರ್ವೋತ್ತರದಲ್ಲಿ ಹಂಸ ಕುಂಡ, ರೇತಸ್ಸು ಕುಂಡಗಳಿವೆ. ಇವುಗಳ ಸ್ನಾನ, ಜಲಪಾನದಿಂದ ಸಾಯುಜ್ಯಮುಕ್ತಿ ದೊರೆಯುವುದು. 'ಮಹಾ ತೀರ್ಥ'ದಲ್ಲಿ ಸ್ನಾನಮಾಡಿ ಭೀಮಸೇನನು ಕೇದಾರೇಶ್ವರನನ್ನು ಪೂಜಿಸಿ ಮಹಾಪಥ ಸೇರಿದನಂತೆ. ಮಧು ಗಂಗಾ ಮಂದಾಕಿನಿಯರ ಸಂಗಮದಲ್ಲಿ ಕ್ರೌಂಚತೀರ್ಥವಿದೆ. ಕ್ಷೀರಗಂಗಾ ಮಂದಾಕಿನಿ ಸಂಗಮದಲ್ಲಿ 'ಪರಬ್ರಹ್ಮ' ತೀರ್ಥವಿದೆ. ಬ್ರಹ್ಮನು ಹಂಸರೂಪ ತಾಳಿ ಕುಂಡದಲ್ಲಿಯ ರೇತಸ್ಸು–ಜಲ–ವನ್ನು ಕುಡಿದನಂತೆ. ಉತ್ತರದಲ್ಲಿ ಪುರಂದರ (ಇಂದ್ರ) ಪರ್ವತವಿದೆ. ಇಲ್ಲಿ ಇಂದ್ರನು ತಪಸ್ಸು ಮಾಡಿದನು ಈ ಸ್ಥಳದಲ್ಲಿ ಶಿವಲಿಂಗವಿದೆ. ಪಿತೃಗಳ ಪ್ರೀತ್ಯರ್ಥವಾಗಿ, ಪರಮಪದ ಪ್ರಾಪ್ತಿಗಾಗಿ ಯಾತ್ರಿಕರು ಈ ಕುಂಡಗಳಲ್ಲಿ ಪಿಂಡ ಪ್ರದಾನ ಶ್ರಾದ್ಧ ಮಾಡುವರು. ಪ್ರಪಂಚದಲ್ಲಿ ಪ್ರಸಿದ್ಧವಾದ ಏಳು ಸರಸ್ವತಿಗಳಲ್ಲಿ ಹಿಮಾಲಯ (ಕೇದಾರ) ದಲ್ಲಿ 'ವಿಮಲೋದಕಾ' ಎಂಬ ಸರಸ್ವತಿಯಿದೆ.

ಗಂಗಾನದಿಯ ಉಗಮಸ್ಥಾನವು ಗಂಗೋತ್ರಿ ಯಮುನಾನದಿಯ ಉಗಮಸ್ಥಾನವಾದ ಯಮುನೋತ್ರಿಗಳು ಬದರೀ ಕೇದಾರ ಕ್ಷೇತ್ರಗಳ ನೆರೆಯಲ್ಲಿವೆ. ಗಂಗೋತ್ರಿಯು 18 ಮೈಲು ದೂರದಲ್ಲಿ ಗೋಮುಖವಿದೆ. ಭಗೀರಥನ ಪ್ರಯತ್ನದಿಂದ ಇಳಿದು ಬಂದ ಗಂಗೆಗೆ 'ಭಾಗೀರಥೀ' ಎಂದು ಕರೆಯುವರು. ಗಂಗಾದರ್ಶನ, ಸ್ನಾನ, ಪಾನಗಳಿಂದ ಸರ್ವಪಾಪಗಳು ನಾಶವಾಗಿ ವೈಕುಂಠಪ್ರಾಪ್ತಿಯಾಗುವುದು ಗಂಗಾಜಲವು ಔಷಧ ಪ್ರಾಯವಾಗಿದೆ. ಪರಮಪಾವನವಾಗಿದೆ ಯಮುನಾನದಿಯ ಸ್ನಾನದಿಂದ ಕೋಟಿ ಜನ್ಮಗಳಲ್ಲಾದ ಪಾಪರಾಶಿಯು ನಾಶವಾಗುವುದು. ಚತುರ್ಧಾಮಗಳಿಂದ ಕೂಡಿದ ನಗಾಧಿ ರಾಜನಿಗೆ ನಮಸ್ಕಾರಗಳು.



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

## ತಿರುಮಲೆ - ತಿರುಪತಿ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ. ತಿ. ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿ॥ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. 1980 ಡಿಸೆಂಬರ್ 27 ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ.

ವೈಷ್ಣವತೆಯ ಉಗಮ-ವಿಕಾಸ: ವಾಸುದೇವ-ವೃಷ್ಣಿಕುಲಜ-ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ. ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ, ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ 10 ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ.

ವಾಸ್ತುಶಾಸ್ತ್ರ: ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮದ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳೂ ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ: ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು: ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು: ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು: ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. 108 ದಿವ್ಯಕ್ಷೇತ್ರಗಳೂ 108 ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ: ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ ಮೊದಲಾದ 8ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. 3ನೇ ರಾಜರಾಜನ ಕುಂಭಕೋಣಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ–

---

**ಕಾಲ: ಬೆಳಗ್ಗೆ ೮ ರಿಂದ ರಾತ್ರಿ - ೮ ವರೆಗೆ ಟಿಕೆಟ್ ರೂ. ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

**ಧಾರಾವಾಹಿ**

# ಭಾರತೀಯ ಪರಮಾರ್ಥ

## ವೈದಿಕ ದರ್ಶನಗಳು

ಇನ್ನು ಮುಂದೆ ಮಾನವ ಜೀವಿತದ ಕೊನೆಯ ಗುರಿಯಾದ ಮುಕ್ತಿಯೆನಿಸಿದ ಆತ್ಮದರ್ಶನ ಮತ್ತು ಬ್ರಹ್ಮಸಾಕ್ಷಾತ್ಕಾರದ ವಿಚಾರವನ್ನು ಪ್ರಸ್ತಾಪಿಸುವೆವು.

ಭಾರತದರ್ಶನಗಳಲ್ಲಿ ವೇದಾಂತದರ್ಶನಗಳೆಂದು ಕರೆಯಲ್ಪಡುವ ದರ್ಶನಗಳು ಮೂರು ಇವೆ:– ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಎಂದು.

ದ್ವೈತಸಿದ್ಧಾಂತವು ಭಗವಾನ್ ಮಧ್ವಾಚಾರ್ಯರಿಂದ ಸ್ಥಾಪಿಸಲ್ಪಟ್ಟಿದ್ದು. ಅದ್ವೈತಸಿದ್ಧಾಂತವು ಭಗವಾನ್ ಶಂಕರಾಚಾರ್ಯರಿಂದ ಪ್ರಚಾರಮಾಡಲ್ಪಟ್ಟದ್ದು. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಭಗವಾನ್ ರಾಮಾನುಜಾಚಾರ್ಯರು ಪ್ರಚಾರ ಮಾಡಿದರು. ಮಧ್ವಾಚಾರ್ಯರು 13 ನೆ ಶತಮಾನದಲ್ಲಿ ಜನಿಸಿದವರು. ಶಂಕರಾಚಾರ್ಯರು ಏಳನೆ ಶತಮಾನದವರು. ರಾಮಾನುಜಾಚಾರ್ಯರು ಹನ್ನೊಂದನೆ ಶತಮಾನದವರು. ಆದರೆ ಇವರಿಗೆ ಮೊದಲು ಈ ಸಿದ್ಧಾಂತಗಳಿರಲಿಲ್ಲವೆಂದಲ್ಲ. ಈ ಸಿದ್ಧಾಂತಗಳೂ ಅನಾದಿ. ಕಾಲಕ್ರಮದಲ್ಲಿ ಅವುಗಳು ಕ್ಷೀಣಿಸಿಹೋಗುವುವು. ಸಕಾಲದಲ್ಲಿ ಪರಮಾತ್ಮನು ಕೆಲವು ಜ್ಞಾನಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿದ್ದು ಅವುಗಳನ್ನು ಪುನರುದ್ಧಾರ ಮಾಡುವನು.

ಪ್ರಸ್ಥಾನ ತ್ರಯಗಳೆಂದು ಕರೆಯಲ್ಪಡುವ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಮತ್ತು ಇವುಗಳ ಜೊತೆಗೆ ಸ್ಮೃತಿಗಳು, ಇತಿಹಾಸಗಳು, ಸಾತ್ವಿಕಪುರಾಣಗಳು ಇವೆಲ್ಲವನ್ನೂ ಆಧಾರವಾಗಿ ವೇದಾಂತಿಗಳು ಪರಿಗ್ರಹಿಸಿರುವರು. ಈ ಸಿದ್ಧಾಂತಗಳ ಸೂಕ್ಷ್ಮ ವಿವರಣೆ ಹೀಗಿರುವುದು.

### ದ್ವೈತಸಿದ್ಧಾಂತ :–

ಇದಕ್ಕೆ ಆನಂದತೀರ್ಥಾಚಾರ್ಯರು ಪ್ರವರ್ತಕರು "ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ। ಭಿನ್ನಾ ಜೀವಗಣಾಃ ಹರೇರನುಚರಾ ನೀಚೋಚ್ಚಭಾವಂಗತಾಃ ॥ ಮುಕ್ತಿರ್ನೈಜಸುಖಾನುಭೂತಿ ರಮಲಾಭಕ್ತಿಶ್ಚತತ್ಸಾಧನಂ। ಹ್ಯಕ್ಷಾದಿತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋ ಹರಿಃ ॥ ಎಂಬ ಶ್ಲೋಕವು ಈ ಸಿದ್ಧಾಂತದ ಸಾರಾಂಶವು.

ಶ್ರೀ ಮಹಾವಿಷ್ಣುವೇ ಜಗತ್ತಿಗೆಲ್ಲಾ ಸರ್ವೋತ್ತಮನು; ಜಗದೀಶ್ವರನು. ಸೃಷ್ಟಿಸಂಹಾರಾದಿಗಳನ್ನೆಲ್ಲಾ ನಡೆಸುವವನು ಇವನೇ. ಇವನಿಗೆ ಅಪ್ರಾಕೃತವಾದ ದಿವ್ಯಮಂಗಳ ವಿಗ್ರಹಸ್ವರೂಪವಿರುವುದು. ಶ್ರೀಮಹಾವಿಷ್ಣುವಿಗೆ ಲಕ್ಷ್ಮೀನಾಮಕಳಾದ ಪತ್ನಿಯೊಬ್ಬಳಿರುವಳು. ಅವಳು ಪರಮಾತ್ಮನಿಗಿಂತ ಬೇರೆಯಾದವಳು. ಪರಮಾತ್ಮನಿಗಿಂತ ಜ್ಞಾನಾನಂದಾದಿಗಳಲ್ಲಿ ಕಡಮೆಯಾದವಳು, ಜಗತ್ತನ್ನೆಲ್ಲಾ ಶ್ರೀಮಹಾವಿಷ್ಣುವಿಗೆ ಎರಡನೆಯವಳು. ಜೀವಾತ್ಮರುಗಳೆಲ್ಲಾ ಇವಳಿಗೆ ಕೆಳಗಿನವರು; ಎಂದರೆ ಅಧೀನರು, ಇವಳಿಗೂ ಪರಮಾತ್ಮನಂತೆಯೇ ಜ್ಞಾನಾನಂದಾದಿಮಯವಾದ ಅಪ್ರಾಕೃತದಿವ್ಯಮಂಗಳ ಸ್ವರೂಪವಿರುವುದು.

ಶ್ರೀಮಹಾವಿಷ್ಣು, ಲಕ್ಷ್ಮಿ ಇಬ್ಬರೇ ನಿತ್ಯ ನಿತ್ಯಮುಕ್ತರು. ಜೀವರುಗಳಲ್ಲಿ ನಿತ್ಯಮುಕ್ತರುಗಳೇ ಇಲ್ಲ. ಇವರೆಲ್ಲರೂ ಸಂಸಾರದೆಸೆಯಲ್ಲಿದ್ದು ಮುಕ್ತಿಯನ್ನು ಹೊಂದುವರು. ಚರಾಚರ ರೂಪವಾದ ಸಮಸ್ತ ಜಗತ್ತೂ ಸತ್ಯವು. ಜಗತ್ತು ಅಸತ್ಯವಲ್ಲ.

ಜೀವಾತ್ಮರು ಪರಮಾತ್ಮನಿಗಿಂತಲೂ ಬೇರೆಯಾದವರು ಜೀವರುಗಳಲ್ಲಿ (1) ಮುಕ್ತಿಯೋಗ್ಯರು (2) ನಿತ್ಯಸಂಸಾರಿಗಳು (3)ತಮೋಯೋಗ್ಯರು ಎಂದು ಮೂರು ವಿಭಾಗಗಳಿರುವುವು.

ಮುಕ್ತಿಯೋಗ್ಯರಲ್ಲಿ ದೇವಗಣ, ಋಷಿಗಣ, ಪಿತೃಗಣ, ಚಕ್ರವರ್ತಿಗಣ, ಮನುಷ್ಯೋತ್ತಮಗಣಗಳೆಂದು ಐದುವಿಧವಾದ ಜೀವರುಗಳಿರುವರು. ಆಯಾಗಣಗಳಲ್ಲಿರುವವರಿಗೆ ಆಯಾಸ್ಥಾನಗಳನ್ನು ಏರುವುದಕ್ಕೆ ಯೋಗ್ಯತೆಯುಂಟು. ಬ್ರಹ್ಮ, ವಾಯು ಮೊದಲಾದವರು ದೇವಗಣಕ್ಕೆ ಸೇರಿದವರು. ನಾರದಾದಿಗಳು ಋಷಿಗಣಕ್ಕೆ ಸೇರಿದವರು. ಚಿರಾದಿಗಳು ಪಿತೃಗಣಕ್ಕೆ ಸೇರಿದವರು. ಅಂಬರೀಷಾದಿಗಳು ಚಕ್ರವರ್ತಿಗಣಕ್ಕೆ ಸೇರಿದವರು.

ಮನುಷ್ಯೋತ್ತಮರಲ್ಲಿ ತ್ರೈವರ್ಣಿಕಜೀವಿಗಳು, ತದ್ವ್ಯತಿರಿಕ್ತರು ಎಂದು ಎರಡು ಪಂಗಡಗಳು ಪರಬ್ರಹ್ಮನನ್ನು 'ಆತ್ಮ' ಎಂಬ ಒಂದೇ ಭಾವದಿಂದ ಉಪಾಸಿಸುವವರು ತ್ರೈವರ್ಣಿಕಜೀವಿಗಳು. ಇವರು ಅಪರೋಕ್ಷ ಜ್ಞಾನವು ಸಿದ್ಧಿಸಿದನಂತರ ಶರೀರಪಾತವಾದನಂತರ (ಎಂದರೆ ಸತ್ತಮೇಲೆ) ಇಲ್ಲಿಯೇ (ಈ ಲೋಕದಲ್ಲೇ) ಮುಕ್ತಿಯನ್ನು ಹೊಂದುತ್ತಾರೆ ತದ್ವ್ಯತಿರಿಕ್ತ ಜೀವರುಗಳು ಪರಬ್ರಹ್ಮ, ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳನ್ನು ಉಪಾಸಿಸುವರು. ಈ ವಿಧವಾದ ಮೋಕ್ಷಸಾಧನೋಪಾಯದಿಂದ ಮುಕ್ತಿಯನ್ನು ಹೊಂದಲು ಇವರು ಸದಾಚಾರ, ಭಗವದ್ಭಕ್ತಿ ಮೊದಲಾದ ಗುಣಗಳಿಂದ ಪೂರ್ಣರಾಗಿರುವರು.

ನಿತ್ಯಸಂಸಾರಿಗಳು:–ಸರ್ವಕಾಲಗಳಲ್ಲೂ ಸುಖದುಃಖಗಳನ್ನು ಮಿಶ್ರವಾಗಿ ಅನುಭವಿಸುತ್ತಿರುವರು. ಈ ನಿತ್ಯಸಂಸಾರಿಗಳು ಪುಣ್ಯಕರ್ಮಗಳಿಂದ ಸ್ವರ್ಗಾದಿಲೋಕಗಳಲ್ಲಿ ಸುಖವನ್ನು ಅನುಭವಿಸುವುದೂ, ಪಾಪಕರ್ಮಗಳಿಂದ ನರಕಯಾತನೆಯನ್ನು ಅನುಭವಿಸುವುದೂ, ಪುನಃಭೂಲೋಕದಲ್ಲಿ ಹುಟ್ಟುವುದೂ ಹೀಗೆಯಾವಾಗಲೂ ಸಂಸಾರಚಕ್ರದಲ್ಲಿ ಸುತ್ತಿಕೊಂಡೇ ಇರುತ್ತಾರೆ.

ತಮೋಯೋಗ್ಯರುಗಳು :– ದೈತ್ಯರು, ಅಸುರರು, ಪಿಶಾಚರು, ಮನುಷ್ಯಾಧಮರು ಎಂದು ನಾಲ್ಕು ವಿಧವಾಗಿರುವರು. ಇವರು ಯಾವಾಗಲೂ ಭಗವದ್ದ್ವೇಷ, ಭಾಗವತದ್ವೇಷ, ದುರಾಚಾರ ಇತ್ಯಾದಿ ಪಾಪಕಾರ್ಯಗಳಲ್ಲೇ ಪ್ರವರ್ತರಾಗಿದ್ದು. ಅಂತ್ಯದಲ್ಲಿ ನರಕದಲ್ಲಿ ಬಿದ್ದು ಕಷ್ಟಪಡುವರು.

ಜೀವರುಗಳೆಲ್ಲರೂ ಜ್ಞಾನಾನಂದ ಸ್ವರೂಪರು, ಅಣುಪರಿಮಾಣವುಳ್ಳವರು, ಭಗವಂತನಿಗೆ ಕಿಂಕ

ಶ್ರೀ ಎಂ. ಓ. ಎಸ್. ಅಯ್ಯಂಗಾರ್

ರರು, ಎಂದರೆ ದಾಸಭೂತರು. ಮುಕ್ತಿಯೋಗ್ಯ ಜೀವರುಗಳಲ್ಲಿ ಸ್ಥಾವರಜೀವರುಗಳಿಗಿಂತಲೂ ಪಶುಪಕ್ಷ್ಯಾದಿ ಜಂಗಮ ಜೀವರುಗಳು ಭಕ್ತಿ ಮತ್ತು ಭಗವತ್ಪ್ರೀತ್ಯತ್ವಾದಿಗಳಲ್ಲೂ ಅವುಗಳ ಫಲವಾಗಿ ಮೋಕ್ಷದೆಸೆಯಲ್ಲಿ ಬರುವ ಆನಂದಾದಿಗಳ ಅನುಭವಗಳಲ್ಲೂ ಮೇಲ್ಪಟ್ಟವರು, ಎಂದರೆ ಅಧಿಕ ಪ್ರಮಾಣವುಳ್ಳವರು. ಪಶುಪಕ್ಷ್ಯಾದಿಗಳಿಗಿಂತಲೂ ಮನುಷ್ಯರು ಉತ್ತಮರು, ಮನುಷ್ಯರಲ್ಲಿ ಬ್ರಾಹ್ಮಣರು ಉತ್ತಮರು. ಬ್ರಾಹ್ಮಣರಿಗಿಂತಲೂ ಚಕ್ರವರ್ತಿ ಗಣದವರು ನೂರು ಪಾಲು ಗುಣಾಧಿಕರು. ಚಕ್ರವರ್ತಿಗಣದವರಿಗಿಂತಲೂ ಮನುಷ್ಯ ಗಂಧರ್ವರು ನೂರರಷ್ಟು ಗುಣಾಧಿಕರು. ಇದೇರೀತಿಯಲ್ಲಿ ಮೇಲೆ ಮೇಲೆ ಗುಣಗಳು ನೂರು ನೂರು ಪಾಲು ಗುಣಾಧಿಕಗಳಾಗಿ ಚತುರ್ಮುಖನ ಪರ್ಯಂತ ಜೀವರುಗಳು ಜ್ಞಾನಾದಿಗಳಲ್ಲಿ ತಾರತಮ್ಯಗಳನ್ನುಳ್ಳವರಾಗಿರುವರು, ಜೀವರುಗಳಲ್ಲಿರುವ ಈ ವಿಧವಾದ ಉಚ್ಚನೀಚ ತಾರತಮ್ಯಗಳು ಈ ಸಿದ್ಧಾಂತಕ್ಕೆ ಮುಖ್ಯಾಂಶವಾಗಿರುವುದು.

ಮೋಕ್ಷವೆಂದರೆ ಸ್ವಸ್ವರೂಪ, ಆನಂದ ಇವುಗಳ ಅನುಭವ ಈ ಅನುಭವವು ಸಂಸಾರದೆಸೆಯಲ್ಲಿ ಕರ್ಮದಿಂದುಂಟಾದ ಪ್ರಾಕೃತ ಶರೀರದಿಂದ ತಡೆಯಲ್ಪಟ್ಟು ಭಗವದನುಗ್ರಹದಿಂದ ಮೋಕ್ಷದೆಸೆಯಲ್ಲಿ ಆ ತಡೆಬಿಡಲ್ಪಟ್ಟು ಅನಂತರದಲ್ಲಿ ವೈಕುಂಠಲೋಕದಲ್ಲಿ ಲಭಿಸುವುದು. ಈ ಮೋಕ್ಷ ಜೀವರುಗಳ ಯೋಗ್ಯತೆಗೆ ತಕ್ಕಂತೆ ಕೆಲವರಿಗೆ ಸಾಲೋಕ್ಯವೂ, ಕೆಲವರಿಗೆ ಸಾಮೀಪ್ಯವೂ, ಕೆಲವರಿಗೆ ಸಾರೂಪ್ಯವೂ, ಕೆಲವರಿಗೆ ಸಾಯುಜ್ಯವೂ ಲಭಿಸುವುವು.

ಈ ವಿಧವಾದ ಮೋಕ್ಷಕ್ಕೆ ಭಕ್ತಿಯಿಂದ ಕೂಡಿದ ಭಗವದುಪಾಸನೆಯು ಸಾಧನವಾಗುವುದು. ಈ ಉಪಾಸನೆಯು ಮನುಷ್ಯೋತ್ತಮಗಳ ಜೀವರುಗಳಿಂದ ಆರಂಭಿಸಿ ಬ್ರಹ್ಮಗಣದವರೆಗೂ ಏಕಗುಣೋಪಾಸನೆ, ಚತುರ್ಗುಣೋಪಾಸನೆ, ಅನೇಕಗುಣೋಪಾಸನೆ ಎಂಬುದಾಗಿ ಬಹುವಿಧ ತಾರತಮ್ಯಗಳಿಂದ ಕೂಡಿರುತ್ತದೆ.

ವಸ್ತುರೂಪವನ್ನು ತಿಳಿಯುವುದಕ್ಕೆ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ, ಆಗಮ ಎಂದು ಮೂರುವಿಧ, ಸಮಸ್ತ ವೇದಾಂತಗಳ ಸಾರವು ಆ ಬ್ರಹ್ಮನೇ ಎಂದು ದ್ವೈತಸಿದ್ಧಾಂತವು ಒಪ್ಪಿಕೊಳ್ಳುತ್ತದೆ.

ಈ ಸಿದ್ಧಾಂತವು ಜೀವಬ್ರಹ್ಮರುಗಳಿಗೆ ಸ್ವರೂಪಭೇದವನ್ನು ನಿರ್ಧರಿಸುವುದರಿಂದ ಇದಕ್ಕೆ ದ್ವೈತ ಸಿದ್ಧಾಂತವೆಂದು ಹೆಸರು.



## ಅದ್ವೈತಸಿದ್ಧಾನ್ತ :

ಬ್ರಹ್ಮೈಕಂ ಪರಮಾರ್ಥಸತ್ತದಿ
ತರನ್ಮಾಯಾಮಯತ್ವಾನ್ಮೃಷಾ ।
ಬ್ರಹ್ಮೈವೈಕಮುಪಾಧಿ ಬಿಂಬಿತ ಮತೋ
ಜೀವೇಶಭಾವಂಗತಃ ॥
ಭ್ರಾಂತಿಸ್ಸಂಸೃತಿರಸ್ಯ ತತ್ಪ್ರಶಮನಂ
ಮುಕ್ತಿಸ್ತದಾಪ್ಯಾತ್ಮತೋ ।
ಬ್ರಹ್ಮೈಕ್ಯಾವಗಮಾಚ್ಛ್ರುತಿ
ಶ್ರವಣಜಾದಿತ್ಯಾಹುರದ್ವೈತಿನಃ ॥

ಎಂಬ ಶ್ಲೋಕವು ಈ ಸಿದ್ಧಾಂತದ ಸಾರಾಂಶರೂಪವಾದದ್ದು. ಇದರ ಅರ್ಥ :- ಏಕಂ=ತನಗೆ ಸಜಾತೀಯವಾಗಲಿ ವಿಜಾತೀಯವಾಗಲಿ ಒಂದೂ ಇಲ್ಲದುದಾಗಿಯೂ, ಮತ್ತು ತನ್ನಲ್ಲಿ ಯಾವವಿಧವಾದ ಗುಣಗಳಿಲ್ಲದುದಾಗಿಯೂ (ಇರುವ), ಬ್ರಹ್ಮ=ಆತ್ಮವಸ್ತುವು, ಪರಮಾರ್ಥ ಸತ್=ಪರಮಾರ್ಥಸತ್ತಾಗಿರುವುದು, (ಆತ್ಮವಸ್ತುವಿಗೆ ಸಜಾತೀಯವಾದದ್ದು ಮತ್ತೊಂದು ಆತ್ಮವಸ್ತುವಾಗುವುದು, ವಿಜಾತೀಯವು ಆತ್ಮೇತರ ವಸ್ತುವಾಗುವುದು), ಇದರಿಂದ ಎರಡನೆಯದಾದ ಆತ್ಮವಸ್ತುವೇ ಇಲ್ಲವೆಂಬವಾಗಿಯೂ, ಆತ್ಮವಸ್ತುವಲ್ಲದ ಬೇರೆವಸ್ತುವೇ (ಜಗತ್ತಿನಲ್ಲಿ) ಇಲ್ಲವೆಂಬದಾಗಿಯೂ ಹೇಳಲ್ಪಟ್ಟಿತು. (ಇಲ್ಲಿ 'ಪ್ರಾತಿಭಾಸಿಕ ಸತ್'' ಮತ್ತು 'ವ್ಯಾವಹಾರಿಕಸತ್'' ಎಂಬುವುಗಳಿಗಿಂತಲೂ ಆತ್ಮವಸ್ತುವು ಬೇರೆ ಎಂಬುದನ್ನು ತೋರಿಸುವುದಕ್ಕಾಗಿ ಬ್ರಹ್ಮವನ್ನು 'ಪಾರಮಾರ್ಥಿಕಸತ್'' ಎಂದು ಕರೆದಿರುವರು. ಈ ಪದಗಳ ಅರ್ಥವು ಮುಂದೆ ವಿವರಿಸಲ್ಪಡುವುದು.) 'ತದಿತರನ್ಮಾಯಾಮಯತ್ವಾನ್ಮೃಷಾ'=ಪರಬ್ರಹ್ಮೇತರವಸ್ತುಗಳು ಮಾಯೆಯ ಕಾರ್ಯವಾದ್ದರಿಂದ ಅಸತ್ಯವು, 'ಬ್ರಹ್ಮೈವೇಕ...ಭಾವಂಗತಂ = ಒಂದೇ ಆದ ಪರಬ್ರಹ್ಮವು ಉಪಾಧಿಯಲ್ಲಿ ಪ್ರತಿಫಲಿಸುವುದರಿಂದ ಜೀವಾತ್ಮನಾಗಿಯೂ ಈಶ್ವರನಾಗಿಯೂ ತೋರುವುದು. ಭ್ರಾನ್ತಿಸ್ಸಂ...ರಸ್ಯ=ಜೀವಾತ್ಮನಿಗೆ ನಾನು ಜ್ಞಾತಾ, ನಾನು ಕರ್ತ, ನಾನು ಭೋಕ್ತಾ ಇತ್ಯಾದಿ ಭ್ರಾಂತಿಯೇ ಸಂಸಾರವು, 'ತತ್ಪ್ರಶಮನಂ ಮುಕ್ತಿಃ'=ಈ ವಿಧವಾದ ಭ್ರಾನ್ತಿ ನಿವೃತ್ತಿಯೇ ಮೋಕ್ಷವು, 'ತದಪಿ ... ಶ್ರವಣಾತ್'' = 'ತತ್ತ್ವಮಸಿ' ಇತ್ಯಾದಿ ವೇದಾನ್ತ ವಾಕ್ಯಶ್ರವಣದಿಂದ ಉಂಟಾಗುವ ಬ್ರಹ್ಮಾತ್ಮೈಕ್ಯ (ತಾನೇ ಬ್ರಹ್ಮನೆಂಬ) ಜ್ಞಾನದಿಂದ ಆ ಭ್ರಾನ್ತಿಯು ನಿವೃತ್ತವಾಗುವುದು, ಇತ್ಯಾಹುರ ದ್ವೈತಿನಃ = ಹೀಗೆಂದು ಅದ್ವೈತ ಸಿದ್ಧಾನ್ತಿಗಳು ಹೇಳುತಾರೆ.

ಜಗತ್ತಿನ ವಿಚಾರ :- ಪಂಚಭೂತಗಳು ಅವುಗಳ ಪರಿಣಾಮಗಳಾದ ಚರಾಚರ ಜಗದ್ರೂಪ

ದಿಂದ ತೋರುವ ವಸ್ತುಗಳು ಪ್ರಾಣಿಗಳು ಎಲ್ಲವೂ ಅಸತ್ಯಗಳು, ಹುಲ್ಲುಮೈದಾನದಲ್ಲಿ ಮಧ್ಯಾಹ್ನ ಕಾಲದಲ್ಲಿ ಅದರಮೇಲೆ ಹರಡಿರುವ ಸೂರ್ಯಕಿರಣಗಳು ವಾಸ್ತವವಲ್ಲದ ನೀರಿನ ಪ್ರವಾಹದಂತೆಯೂ, ಅಲೆಗಳಂತೆಯೂ ಕಾಣುವಂತೆ ಈ ಚರಾಚರ ಪ್ರಪಂಚವೆಲ್ಲವೂ ವಾಸ್ತವವಲ್ಲದಿದ್ದರೂ ನಿಜವಾಗಿಯೂ ಇರುವಂತೆ ನಮಗೆ ತೋರುವುದು.

ಸತ್ಯಸ್ವರೂಪನಾದ ಪರಬ್ರಹ್ಮನು ಕಣ್ಣಿಗೆ ಕಾಣದೆ ಅಸತ್ಯವಾದ ಚರಾಚರ ಜಗತ್ತು ಯಾತಕ್ಕೆ ಕಾಣುವುದೆಂದರೆ ಸತ್ಯಸ್ವರೂಪನಾದ ಬ್ರಹ್ಮನಿಗೆ ಅನಾದಿಯಾದ ಮಾಯೆಯ ಸಂಬಂಧವೊಂದು ಏರ್ಪಡುವುದು. ಆ ಮಾಯೆಗೆ ತನಗೆ ಆಧಾರಭೂತವಾದ ಪರಬ್ರಹ್ಮಸ್ವರೂಪವನ್ನು ಮರೆಸುವುದು ಸ್ವಭಾವವಾಗಿರುವುದು. ಈ ವಿಧವಾದ ಮಾಯೆಯಿಂದ ಆವರಿಸಲ್ಪಟ್ಟಿರುವುದರಿಂದ ಆ ಪರಬ್ರಹ್ಮವು ತನ್ನ ನಿಜವಾದ ಸ್ವರೂಪದಿಂದ ಪ್ರಕಾಶಿಸುವುದಿಲ್ಲ. ಈ ಬ್ರಹ್ಮನಿಗೆ 'ಸತ್' ಎಂದರೆ ಪ್ರಕಾಶ, ಚಿತ್ ಎಂದರೆ ಜ್ಞಾನ, ಮತ್ತು ಆನಂದಗಳೆಂಬ ಮೂರು ಆಕಾರಗಳಿರುವುವು. ಆದರಿಂದ ಅವನು ಸಚ್ಚಿದಾನಂದನೆಂದು ಹೇಳಲ್ಪಡುವನು. "ಸತ್ಯಂಜ್ಞಾನಮನನ್ತಂಬ್ರಹ್ಮ"– ಆನಂದೋಬ್ರಹ್ಮ" ಎಂಬ ಉಪನಿಷದ್ವಾಕ್ಯಗಳು ಆ ಪರಬ್ರಹ್ಮನ ಸಚ್ಚಿದಾನಂದತ್ವವನ್ನು ಸ್ಥಾಪಿಸುವ ಆಧಾರವಾಕ್ಯಗಳು. ಸತ್ಯವಾದ ಒಂದು ವಸ್ತುವು ಭ್ರಮೆಯಿಂದ ಬೇರೆವಸ್ತುವಾಗಿ ಕಾಣುತ್ತದೆ ಎಂಬುದನ್ನು ತರ್ಕದಿಂದ ಒಪ್ಪಿಕೊಂಡರೆ ಭ್ರಮೆಯರೂಪದಲ್ಲಿ ಕಾಣುವ ಪ್ರಪಂಚಕ್ಕೆ ಸತ್ಯವಾದ ಪರಬ್ರಹ್ಮ ವಸ್ತುವೊಂದಿರಬೇಕು ಅದಕ್ಕೆ ಉದಾಹರಣೆಯಾಗಿ ಹಗ್ಗವು ಭ್ರಮೆಯಿಂದ ಸರ್ಪದಂತೆ ದೂರದಿಂದ ಕಾಣುವಂತೆಯೂ ಮುತ್ತಿನ ಚಿಪ್ಪು ದೂರದಿಂದ ನೋಡಿದಾಗ ಅದು ಬೆಳ್ಳಿಯಂತೆ ಕಾಣುವಂತೆಯೂ ಇಲ್ಲಿ ಪರಬ್ರಹ್ಮವು ಭ್ರಾನ್ತಿಯಿಂದ ಪ್ರಪಂಚರೂಪದಲ್ಲಿ ತೋರುವುದು.

ಕೆಲವು ಶ್ರುತಿಗಳಲ್ಲಿ ಮಾಯೆಗೆ ನಾಶವು ಸೂಚಿಸುವುದರಿಂದ ಮಾಯೆ ಸತ್ಯವಲ್ಲ, ಎಂದು ಹೇಳುವರು. ಈ ಮಾಯೆಯು ಬ್ರಹ್ಮವನ್ನು ಆವರಿಸಿ ಪಂಚಭೂತಗಳಾಗಿಯೂ, ಪ್ರಪಂಚವಾಗಿಯೂ ಕಾಣುವುದು ಇದು ಮಾಯೆಯ ಕಾರ್ಯವಾದ್ದರಿಂದ ಪ್ರಪಂಚವು ಅಸತ್ಯ, ಬ್ರಹ್ಮವೊಂದೇ ಸತ್ಯ, "ನೇಹನಾನಾಸ್ತಿ ಕಿಂಚನ" ಎಂಬ ವಾಕ್ಯವು 'ಅನೇಕಗಳಾಗಿ ತೋರುವವುಗಳು ಯಾವುವೂ ಇಲ್ಲ' ಎನ್ನುವುದರಿಂದ ಜಗತ್ತು ಮಿಥ್ಯೆ ಅಥವಾ ಸುಳ್ಳು, ಎಂದು ಏರ್ಪಡುವುದು.

ಈ ಸಿದ್ಧಾನ್ತದ ಮೂಲಶ್ಲೋಕದಲ್ಲಿ "ಪಾರಮಾರ್ಥಿಕ ಸತ್" ಎಂಬ ಪದವು ಉಪಯೋಗಿಸಲ್ಪಟ್ಟಿದೆ. "ಸತ್" ಎಂಬ ಪದವು 'ಪ್ರಾತಿಭಾಸಿಕ' 'ವ್ಯಾವಹಾರಿಕ' ಮತ್ತು 'ಪಾರಮಾರ್ಥಿಕ'ಎಂದು ಮೂರುವಿಧ. ಯಾವ ಪರಬ್ರಹ್ಮ ಸ್ವರೂಪವು ಮೊದಲು ಭ್ರಾಂತಿಯಿಂದ ಬೇರೆಬೇರೆಯಾಗಿ ಕಾಣಲ್ಪಟ್ಟು ಆ ಭ್ರಾಂತಿ ನೀಗಿದಮೇಲೆ ಮೊದಲಿನಂತೆ ಪ್ರಕಾಶಿಸುವುದೋ ಅದು ಪ್ರಾತಿಭಾಸಿಕ ಸತ್, ಎಂದು ಹೇಳಲ್ಪಡುವುದು. ಇದಕ್ಕೆ ಮುತ್ತಿನಚಿಪ್ಪಿನ ಉದಾಹರಣೆ ಅನ್ವಯಿಸುವುದು. "ವ್ಯಾವಹಾರಿಕ ಸತ್" ಎಂಬುವುದು ಪಂಚಭೂತಗಳು, ಮತ್ತು ಪ್ರಪಂಚದಲ್ಲಿ ಉಪಯೋಗಿಸುವ ಪದಾರ್ಥಗಳು. ಇವು ಯಾವುವೂ ಇಲ್ಲದಿದ್ದರೂ ಮಾಯೆಯಿಂದ ಅಸ್ತಿತ್ವವಾಗಿ ಜಗತ್ತಾಗಿಯೂ ಪದಾರ್ಥಗಳಾಗಿಯೂ ತೋರಿ ನಾವು ಜೀವಿಸಿರುವ ವರೆಗೂ ವ್ಯವಹಾರದಲ್ಲಿ ಉಪಯೋಗವಾಗುವುದರಿಂದ ಅದನ್ನು ವ್ಯಾವಹಾರಿಕಸತ್ತೆಂದು ಹೇಳುವರು. ಯಾವಕಾಲದಲ್ಲೂ ವಿಚ್ಛೇದವಿಲ್ಲದೆ ಸರ್ವಕಾಲಗಳಲ್ಲೂ ಒಂದೇವಿಧವಾಗಿ ತೋರುವ ನಿರ್ಗುಣಬ್ರಹ್ಮವು ಪಾರಮಾರ್ಥಿಕ ಸತ್ತೆಂದು ಹೇಳಲ್ಪಡುವುದು.

ಜೀವೇಶ್ವರವಿಚಾರ –

ಜೀವರೆಂಬುವರೇ ಇಲ್ಲ, ಅವು ಒಂದೇ ಬಿಂಬದ ಅನೇಕ ಪ್ರತಿಬಿಂಬಗಳು. ಬ್ರಹ್ಮಸ್ವರೂಪವನ್ನು ಮರೆಸುವ ಮಾಯೆ ಎರಡುವಿಧವಾಗಿರುವುದು. ಒಂದು ಸತ್ತ್ವಪ್ರಚುರವಾದ ಮಾಯೆ; ಮತ್ತೊಂದು ಸತ್ತ್ವಗುಣ ಕಡಿಮೆಯಾಗಿರುವ ಮಾಯೆ ಮೊದಲನೆಯದಕ್ಕೆ ಮಾಯೆಯೆಂದೂ ಎರಡನೆಯದಕ್ಕೆ ಅವಿದ್ಯೆಯೆಂದೂ ಹೆಸರು. ಇವೆರಡಕ್ಕೂ ಕನ್ನಡಿಯಂತೆ ಬಿಂಬವನ್ನು ಗ್ರಹಿಸುವ ಶಕ್ತಿಯಿರುವುದು. ಈ ಗುಣದಿಂದ ಪರಬ್ರಹ್ಮವು ಇವುಗಳಲ್ಲಿ ಪ್ರತಿಬಿಂಬವಾಗಿ ತೋರುವುದು. ಇವುಗಳಲ್ಲಿ ಮಾಯೆಯಲ್ಲಿ ಪ್ರತಿಬಿಂಬಿಸುವ ಪರಬ್ರಹ್ಮನಿಗೆ ಈಶ್ವರನೆಂದೂ, ಅವಿದ್ಯೆಯಲ್ಲಿ ಪ್ರತಿಬಿಂಬಿಸುವ ಪರಬ್ರಹ್ಮನಿಗೆ 'ಜೀವ' ವೆಂದೂ ಹೆಸರು. ಅವಿದ್ಯಾಂಶಗಳೂ ಅಂತಃಕರಣಗಳೂ ಬಹುವಾಗಿರುವುದರಿಂದ ಅವುಗಳಲ್ಲಿ ಪ್ರತಿಬಿಂಬಿಸುವ ಅನೇಕ ಪ್ರತಿಬಿಂಬಗಳು ಅನೇಕ ಜೀವರುಗಳಾಗಿ ಹೇಳಲ್ಪಡುವರು. ಕನ್ನಡಿಯಲ್ಲಿರುವ ವಿವಿಧ ಭೇದಗಳಂತೆ ಪ್ರತಿಬಿಂಬಗಳೂ ವಿವಿಧವಾಗಿ ತೋರುವುವು, ಈಶ್ವರನನ್ನು ಸಗುಣಬ್ರಹ್ಮವೆನ್ನುವರು. ಅವನು ಸತ್ತ್ವಮಯವಾದ ಪ್ರತಿಬಿಂಬಸ್ವರೂಪನಾದ್ದರಿಂದ ಅವನು ಸರ್ವಜ್ಞನು, ಸರ್ವಶಕ್ತನು ಇತ್ಯಾದಿ ಈಶ್ವರನ ಗುಣಗಳಿಂದ ಕೂಡಿರುವನು.

ಜೀವರೂಪವಾದ ಪ್ರತಿಬಿಂಬಕ್ಕೆ ಆಶ್ರಯವಾದ ಅವಿದ್ಯೆ ಅಥವಾ ಅಂತಃಕರಣವು ಕಡಮೆಯಾದ ಸತ್ತ್ವಗುಣವುಳ್ಳದ್ದಾಗಿ ಅಲ್ಪವಾದ ಜ್ಞಾನಶಕ್ತಿಗಳಿಂದ ಕೂಡಿರುತ್ತದೆ. ಆದರಿಂದ ಅವಿದ್ಯೆಯಲ್ಲಿ ಪ್ರತಿಬಿಂಬಿಸುವ ಜೀವನು ಅಲ್ಪಜ್ಞನಾಗಿಯೂ ಅಲ್ಪಶಕ್ತಿಯುಳ್ಳವನಾಗಿಯೂ ಇರುವನು. ಮಾಯಾಪರಿಣಾಮ (ವಿಕಾರ)ವಾದ ಅಂತಃಕರಣದಲ್ಲಿ ವಿಕಾರಗಳಾದ ಜ್ಞಾನ, ಇಚ್ಛೆ, ಕೃತಿ, ದ್ವೇಷ, ಸುಖದುಃಖ ಇತ್ಯಾದಿಗಳು ಅಂತಃಕರಣ ಪ್ರತಿಬಿಂಬಿಸುವ ಜೀವನಲ್ಲಿ ಕಾಣುವುದರಿಂದ ಜೀವಾತ್ಮನಿಗೆ ತಾನು ಜ್ಞಾತಾ, ಕರ್ತಾ, ಭೋಕ್ತಾ, ಸುಖಿ, ದುಃಖಿ ಇತ್ಯಾದಿ ವ್ಯವಹಾರಗಳಿರುವುವು ಜೀವನಲ್ಲಿ ಜ್ಞಾನಶಕ್ತ್ಯಾದಿಗಳು ಕಡಮೆ. ಇದ್ದರಿಂದ ರಾಗದ್ವೇಷಗಳಿಂದ ಕೂಡಿದವನಾಗಿ ಇಷ್ಟ ವಸ್ತುಗಳನ್ನು ಪಡೆಯುವುದಕ್ಕೂ ಅನಿಷ್ಟನಿವೃತ್ತಿಗಾಗಿಯೂ ತನ್ನಲ್ಲಿ ಶಕ್ತಿಯಿಲ್ಲದವನಾಗಿ ಈಶ್ವರನನ್ನು ಉಪಾಸಿಸಿ ಅವನ ಅನುಗ್ರಹದಿಂದ ಐಶ್ವರ್ಯಾದಿ ಸಾಂಸಾರಿಕ ಫಲಗಳನ್ನು ಪಡೆಯುವನು ನಿಷ್ಕಾಮನಾಗಿ ಈಶ್ವರನನ್ನು ಉಪಾಸಿಸಿದರೆ ಅವನ ಅನುಗ್ರಹದಿಂದ ಚಿತ್ತಶುದ್ಧಿಯನ್ನು ಹೊಂದಿ ವೇದಾನ್ತಶ್ರವಣಕ್ಕೆ ಅಧಿಕಾರಿಯಾಗುತ್ತಾನೆ.

ಬಂಧ ಮತ್ತು ಮೋಕ್ಷ:– ಅಂತಃಕರಣದಲ್ಲಿ ಪ್ರತಿಬಿಂಬವಾದ ಜೀವನು ಸತ್ಯದಲ್ಲಿ ಆ ಪರಬ್ರಹ್ಮವೇ. ಹೀಗಿದ್ದರೂ ಉಪಾಧಿಯಾದ (ಪ್ರತಿಬಿಂಬಕ್ಕೆ ಆಧಾರವಾದ) ಅಂತಃಕರಣದಲ್ಲಿ ವಿಕಾರವಾದ ರಾಗದ್ವೇಷಾದಿಗಳು ಅವನಲ್ಲಿ ತೋರುವುವು. ಈ ವಿಧವಾದ ಭ್ರಾಂತಿಯೇ ಸಂಸಾರವು. ಈ ರೀತಿಯಾದ ಸಂಸಾರದಿಂದ ವಿಮುಕ್ತನಾಗುವುದಕ್ಕೆ ಜೀವನು ಯಾಗ, ದಾನ, ಹೋಮಾದಿ ವೈದಿಕ ಕರ್ಮಗಳ ಮೂಲಕ ಈಶ್ವರನನ್ನು ಆರಾಧಿಸಿದರೆ ಅವನ ಅನುಗ್ರಹದಿಂದ ಜೀವನಿಗೆ ಚಿತ್ತಶುದ್ಧಿಯುಂಟಾಗುವುದು, ತತ್ಫಲವಾಗಿ ಅವನಿಗೆ ಮೋಕ್ಷದಲ್ಲಿ ಆಸೆಹುಟ್ಟಿ, ಅದಕ್ಕಾಗಿ ವೇದಾನ್ತಶ್ರವಣದಲ್ಲಿ ಆಸೆಯೊಡನೆ ಪ್ರವರ್ತಿಸುವನು. ಅನಂತರ ಗುರೂಪದೇಶದಿಂದ "ತತ್ತ್ವಮಸಿ" ಎಂಬ ವೇದಾನ್ತ ವಾಕ್ಯದ ಅರ್ಥಜ್ಞಾನ ವುಂಟಾಗುವುದು, ಆ ವಾಕ್ಯದಲ್ಲಿ ತತ್=ಅದು, ಎಂದರೆ ಪರಬ್ರಹ್ಮನ, ತ್ವಂ = ನೀನೇ, ಅಸಿ=ಆಗಿರುವೆ, ಈ ಮಂತ್ರವನ್ನು ಅರ್ಥದೊಡನೆ ಧ್ಯಾನಿಸಿದರೆ ಮೇಲೆಹೇಳಿದ ಅರ್ಥದ ಸಾಕ್ಷಾತ್ಕಾರ ಜ್ಞಾನವುಂಟಾಗುವುದು, ಈ ಮುಕ್ತಿಗೆ ದೇಶಾನ್ತರಗಳಿಗೆ ಹೋಗಬೇಕಾಗಿಲ್ಲ. ಇದ್ದಲ್ಲಿಯೇ ಮುಕ್ತಿಯನ್ನು ಪಡೆಯುವನು, ಈ ಸಿದ್ಧಾನ್ತದಲ್ಲಿ ಪರಬ್ರಹ್ಮನಲ್ಲದೆ ಬೇರೇನೂ ಇಲ್ಲವೇ ಇಲ್ಲವೆಂದು ಹೇಳುವುದರಿಂದಲೂ ಜೀವಬ್ರಹ್ಮೈಕ್ಯವು ಹೇಳಲ್ಪಟ್ಟಿದ್ದಾಗುವುದರಿಂದಲೂ ಇದಕ್ಕೆ ಅದ್ವೈತ ಸಿದ್ಧಾನ್ತವೆಂದು ಹೆಸರು.

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು - ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4-50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) —ವಿ. ಬಾದರಾಯಣ ಮೂರ್ತಿ 12-50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) —ಬನ್ನಂಜೆ ಗೋವಿಂದಾಚಾರ್ಯ 7-00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಇಂಗ್ಲಿ, ಹಿಂದಿ, ಚಿತ್ರವಿವರಣೆ) —ಸಂ. ಕೆ. ಅಪ್ಪಣ್ಣಾಚಾರ್ಯ 3-75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಇಂಗ್ಲಿ, ಹಿಂದಿ, ಚಿತ್ರವಿವರಣೆ) —ಸಂ. ಕೆ. ಅಪ್ಪಣ್ಣಾಚಾರ್ಯ 2-25

ಗೀತಾಸಾರೋದ್ಧಾರ —ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4-00

ಸ್ತೋತ್ರ ಕುಸುಮಮಾಲಾ —ಸಂ. ವೆಂಕಟಾಚಲ 3-00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10-00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0-40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0-50

" (ಕನ್ನಡ ಲಿಪಿಯಲ್ಲಿ) 0-12

ಮಕ್ಕಳಿಗಾಗಿ :

ಶ್ರೀಪಾದರಾಜರು —ಎಂ. ಎಸ್. ಗುಂಡೂರಾವ್ 0-75

ಮಹಿಪತಿದಾಸರು —ಶಾನಭಾಗ 0-85

ಪ್ರಸನ್ನ ವೆಂಕಟದಾಸರು —ವಿ. ಬಾದರಾಯಣಮೂರ್ತಿ 0-80

ಗೋಪಾಲದಾಸರು —ರುಕ್ಮಿಣಿಗಿರಿರಾಜ 0-75

### ಹಿಂದಿ :

ಶ್ರೀವೇಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ —ಡಾ॥ ಎಂ. ಸಂಗಮೇಶಂ 0-20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11-00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1-50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0-12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0-62

ಕಠೋಪನಿಷತ್ —ಡಾ॥ ಕೆ ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15-00

ಮಾರ್ಕಂಡೇಯ ಸಂಹಿತಾ 18-00

ತತ್ತ್ವಸಂಖ್ಯಾನಂ —ಆರ್. ರಾಮಮೂರ್ತಿ ಶರ್ಮಾ 2-00

ಬ್ರಹ್ಮಸೂತ್ರ ಭಾಷ್ಯ (ಭಾಗ-1) —ಆರ್. ರಾಮಮೂರ್ತಿ ಶರ್ಮಾ 30-00

ಅಲಂಕಾರ ಸಂಗ್ರಹ ಸಂ—ಕೆ. ಭಾಸ್ಕರರಾವ್ 16-00

ಸೀತಾರಾಮಾಂಜನೇಯಂ —ಡಾ॥ ಡಿ. ಅರ್ಕಸೋಮಯಾಜಿ 50-00

ಪ್ರಶ್ನೋಪನಿಷತ್ 11-00

ಶ್ರೀಮುಕ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ —ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25-00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್ ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

## ವಿಶಿಷ್ಟಾದ್ವೈತ ಸಿದ್ಧಾಂತ:

ಈ ಸಿದ್ಧಾಂತಕ್ಕೆ ಭಗವದ್ರಾಮಾನುಜಾಚಾರ್ಯರು ಪ್ರವರ್ತಕರು

ಶ್ರೀಮಲ್ಲಕ್ಷ್ಮಣಯೋಗಿನಸ್ತು
ಭುವನಂ ಸತ್ಯಂತದೀಶಃ ಶ್ರಿಯಃ ।
ಕಾಂತೋಬ್ರಹ್ಮ ಸ ಏವಸೋಽಖಿಲತನುಃ
ಭಿನ್ನಾಸ್ತತಶ್ಚೇತನಾಃ ।
ಸತ್ಯಾಸಂಸೃತಿರೀಶ ನಿಗ್ರಹಕೃತಾ
ಮುಕ್ತಿಸ್ತು ಭಕ್ತ್ಯಾದಿನಾ ।
ತತ್ಪ್ರಾಪ್ತಿಃ ಪರಮೇಪದೇ
ತದನುಭೂತಾತ್ಮೈಕಸಂಚಕ್ಷತೇ ॥

ಇದು ಈ ಸಿದ್ಧಾಂತದ ಸಂಗ್ರಹ ಶ್ಲೋಕ. ಇದರ ಅರ್ಥ :— ಭಗವದ್ರಾಮಾನುಜಾಚಾರ್ಯರು ಅನುಗ್ರಹಿಸಿರುವ ತತ್ತ್ವವೇನೆಂದರೆ ಭುವನಂ ಸತ್ಯಂ-ಈ ಪ್ರಪಂಚವು ಸತ್ಯವು. ಮುತ್ತಿನಚಿಪ್ಪಿನಲ್ಲಿ ದೂರದಿಂದ ಕಾಣುವ ಬೆಳ್ಳಿಯಂತೆ ಸುಳ್ಳಲ್ಲ. ಅದು ಭ್ರಾಂತಿಯೇ ವಿನಾ ಯಾವ ಕೆಲಸಕ್ಕೂ ಉಪಯೋಗವಾಗುವುದಿಲ್ಲ. ಬೆಳ್ಳಿಯಿಂದ ಮಾಡಲ್ಪಡುವ ಪಾತ್ರೆಗಳು ನೀರು ತುಂಬುವುದು ಮುಂತಾದ ಕಾರ್ಯಗಳಿಗೆ ಉಪಯೋಗವಾಗುವುದು, ಅದರಿಂದ ಅದು ಅಸತ್ಯವಲ್ಲ. ಅದೂ ಅಲ್ಲದೆ ಈಶ್ವರನು ಪ್ರಕೃತಿಯೆಂಬ ವಸ್ತುವನ್ನು ಉಪಯೋಗಿಸಿ ತನ್ನ ಸಂಕಲ್ಪಶಕ್ತಿಯಿಂದ ಪ್ರಪಂಚವನ್ನು ಸೃಷ್ಟಿಸುತ್ತಾನೆ ಎಂಬುವುದಕ್ಕೆ ಶ್ರುತಿಪ್ರಮಾಣವಿರುವುದು. ಆದರಿಂದ ಪರಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಪ್ರಪಂಚವು ಅಸತ್ಯವಾಗಲಾರದು, ಸುಳ್ಳಾಗಲಾರದು. ಸುಳ್ಳಾದವಸ್ತುವಿಗೆ ಸೃಷ್ಟಿ ಸಂಭವಿಸಲಾರದಲ್ಲವೆ! ಮಾಯೆಯನ್ನು ಸಹಾಯವಾಗಿ ಉಪಯೋಗಿಸಿಕೊಂಡು ಈ ಪ್ರಪಂಚವನ್ನು ಸೃಷ್ಟಿಸಿದನು, ಮಾಯೆಯೆಂದರೆ ಪ್ರಕೃತಿಯೆಂಬ ಅರ್ಥವನ್ನು "ಮಾಯಾಂತು ಪ್ರಕೃತಿಂ ವಿದ್ಯಾತ್" ಎಂದು ಉಪನಿಷತ್ತಿನಲ್ಲಿ ಹೇಳಿರುವುದು, (ಶ್ವೇ. ಉ. 4–10) ಆದರಿಂದ ಪ್ರಕೃತಿಯ ಸಹಾಯದಿಂದ ಪ್ರಪಂಚಸೃಷ್ಟಿ ಮಾಡಲ್ಪಡುವುದೆಂದು ಅರ್ಥವಾಗುವುದು. ವಿಚಿತ್ರಸೃಷ್ಟಿಗೆ ಕಾರಣವಾಗಿರುವುದರಿಂದ ಪ್ರಕೃತಿಯನ್ನು ಮಾಯೆಯೆಂದು ಹೇಳುವುದೇ ವಿನಾ 'ಸುಳ್ಳು' ಎಂಬ ಅರ್ಥವನ್ನು ಸೂಚಿಸುವುದಿಲ್ಲ. ಮಾಯೆಯೆಂಬ ಪದಕ್ಕೆ ಅಸತ್ಯ, ಸುಳ್ಳು ಎಂಬ ಅರ್ಥವೇ ಆಗುವುದಿಲ್ಲ. "ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂದಧಾಮ್ಯಹಂ । ಸಂಭವಃ ಸರ್ವಭೂತಾನಾಂ ತತೋ ಭವತಿಭಾರತ ॥ (ಭ. ಗೀ. 14–3) ಎಂದರೆ ಜಗತ್ತಿಗೆ ಮೂಲ (Basic Material) ಕಾರಣವಾದ ನನ್ನದೇಹವೇ ಆದ ಪ್ರಕೃತಿಯೆಂಬ ವಸ್ತುವಿನಲ್ಲಿ ಜೀವಸಮುದಾಯವನ್ನು ನಾನೇ ಸೇರಿಸುವೆನು. ಅದರಿಂದ ಸಮಸ್ತಭೂತಗಳೂ ಉಂಟಾಗುತ್ತವೆ ಎಂದು ಅಚೇತನವಾದ ಪ್ರಕೃತಿಯೊಡನೆ ಚೇತನವಸ್ತುವನ್ನು ಈಶ್ವರನು ಸೇರಿಸುವುದರಿಂದ ಈ ಪ್ರಪಂಚವುಂಟಾಯಿತು ಎಂದು ಹೇಳಿರುವುದರಿಂದ ಈ ಪ್ರಪಂಚವು ಪರಬ್ರಹ್ಮನ ಅಜ್ಞಾನದಿಂದ ಕಲ್ಪಿತವಾದದ್ದು ಎಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ.

ತದೀಶಃ ಶ್ರಿಯಃಕಾಂತಃ=ಶ್ರಿಯಃಪತಿಯಾದ ಶ್ರೀಮನ್ನಾರಾಯಣನು ಈ ಚರಾಚರ ಜಗತ್ತುಗಳಿಗೆಲ್ಲಾ ಈಶ್ವರನು. ಬ್ರಹ್ಮಸ ಏವ=ಅವನೇ (ಎಂದರೆ ಶ್ರೀಮನ್ನಾರಾಯಣನೇ) ಪರಬ್ರಹ್ಮನು. ತೈತ್ತಿರಿಯೋಪನಿಷತ್ತಿನಲ್ಲಿ "ಯತೋವಾ ಇಮಾನಿ ಭೂತಾನಿ ಜಾಯನ್ತೇ। ಯೇನ ಜಾತಾನಿಜೀವನ್ತಿ। ಯತ್ಪ್ರಯಂತ್ಯಭಿಸಂ ವಿಶನ್ತಿ। ತದ್ವಿಜಿಜ್ಞಾಸಸ್ವ। ತದ್ಬ್ರಹ್ಮೇತಿ ॥ (ತೈ. 3–1) ಎಂದರೆ ಯಾವುದು ಜಗತ್ತಿನ ಸೃಷ್ಟಿ, ಸ್ಥಿತಿ ಪ್ರಳಯಗಳಿಗೆ ಕಾರಣವೋ ಅದು ಬ್ರಹ್ಮವು ಎಂದು ಹೇಳಿದೆ. ನಾರಾಯಣೋಪನಿಷತ್ತು ಇತ್ಯಾದಿ ಉಪನಿಷತ್ತುಗಳಲ್ಲಿ ನಾರಾಯಣನೇ ಜಗತ್ಕಾರಣನು ಎಂದು ಹೇಳಿದೆ. ಆದರಿಂದ ನಾರಾಯಣನೇ ಪರಬ್ರಹ್ಮವು ಎಂದು ಸಿದ್ಧಿಸುವುದು. "ನಾರಾಯಣಪರಂ ಬ್ರಹ್ಮತತ್ತ್ವಂ ನಾರಾಯಣಃ ಪರಃ" ಎಂದು ಇದನ್ನೇ ಉಪನಿಷತ್ತುಗಳು ಹೇಳುವುವು. ನಿರ್ಗುಣಬ್ರಹ್ಮವೆಂದು ಬೇರೊಂದು ಬ್ರಹ್ಮವಿಲ್ಲ. ಉಪನಿಷತ್ತುಗಳಲ್ಲಿ ಬ್ರಹ್ಮನು ಎಂದು ಯಾವ ಕಾರಣದಿಂದ ಹೇಳಲ್ಪಡುವುದು ? ಎಂಬ ಪ್ರಶ್ನೆಗೆ ಅವನಲ್ಲಿ ಸಮಸ್ತ ಸದ್ಗುಣಗಳೂ ಪೂರ್ಣವಾಗಿರುವುದರಿಂದ—

ಅಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀಜ್ಞಾನಬಲಕ್ರಿಯಾಚ
(ಶ್ವೇ. 6–8)
ಯಸ್ಸರ್ವಜ್ಞಸ್ಸರ್ವವಿತ್ (ಮುಂ. 2–2–7)
ಸತ್ಯಂಜ್ಞಾನಮನನ್ತಂಬ್ರಹ್ಮ (ತೈ ಆನ. 1)
ಸತ್ಯಕಾಮಸ್ಸತ್ಯಸಂಕಲ್ಪಃ (ಛಾ 8–1–5)
ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ
ಸ್ವಾಭಾವಿಕೀಜ್ಞಾನ ಬಲಕ್ರಿಯಾ
ಚ ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ
(ಶ್ವೇ.ಉ. 6–8)

—ಎಂದು ಉತ್ತರವನ್ನು ಹೇಳಿದೆ. ಆದ್ದರಿಂದ ಬ್ರಹ್ಮಶಬ್ದವು ಅನನ್ತಗುಣಪೂರ್ಣ ವಸ್ತುವನ್ನು ಹೇಳುವುದರಿಂದ ನಿರ್ಗುಣವನ್ನು ಬೋಧಿಸಲಾರದು. ಆದರಿಂದ ಸಮಸ್ತ ಕಲ್ಯಾಣಗುಣ ಪೂರ್ಣನಾದ ಶ್ರೀಮನ್ನಾರಾಯಣನೇ ಪರಬ್ರಹ್ಮನು ಎಂದು ಸಿದ್ಧವಾಗುವುದು, ಅವನೇ ಪರಬ್ರಹ್ಮವಾಚ್ಯನು.

ಸಃ ಅಖಿಲತನು .— ಈ ಪರಬ್ರಹ್ಮನೇ ಸಕಲ ಚರಾಚರ ಶರೀರಿಯು. ಶರೀರವೆಂಬ ಪದಕ್ಕೆ 'ಒಬ್ಬ ಚೇತನನಿಗೆ ಯಾವುದು ನಿಯತಾಧೇಯವಾಗಿಯೂ, ನಿಯತ ನಿಯಾಮ್ಯವಾಗಿಯೂ, ನಿಯತ ಶೇಷವಾಗಿಯೂ ಇರುವುದೋ ಅದೇ ಆ ಚೇತನನಿಗೆ ಶರೀರವು' ಎಂಬುವುದು ವೇದಾಂತಗಳ ವಿವರಣವು. 'ನಿಯತಾಧೇಯ' ವೆಂದರೆ— ಯಾವಾಗಲೂ ಆ ಚೇತನನ ಸ್ವರೂಪವನ್ನು ಬಿಡದೆ ಆಶ್ರಯಿಸಿರುವಿಕೆ, ಎಂದರೆ ಅವನ ಸ್ವರೂಪದ ಸಂಬಂಧದಿಂದಲೇ ತಾನು ಒಂದು ವಸ್ತುವಾಗಿರುವಿಕೆ. 'ನಿಯತನಿಯಾಮ್ಯ' ವೆಂದರೆ—ಆ ಚೇತನನ ಸಂಕಲ್ಪವೇ ತನ್ನ ಸಂಕಲ್ಪವಾಗಿರುವಿಕೆ. 'ನಿಯತ ಶೇಷ'ವೆಂದರೆ – ಆ ಚೇತನನ ಪ್ರಯೋಜನಕ್ಕಾಗಿಯೇ ಇರುವುದು. ನಮ್ಮ ಶರೀರವು ಒಳಗಿನ ಆತ್ಮವಿರುವವರೆಗೂ ಸರಿಯಾಗಿದ್ದು ಅದು ಬಿಟ್ಟು ಹೋದ ಒಡನೆಯೇ ನಶಿಸಿಹೋಗುವುದು. ಈ ಸ್ಥಿತಿಯು ಕೆಲವು ವೇಳೆಗಳಲ್ಲಿ ಮಾತ್ರ ಇದ್ದು ಇತರ ಕಾಲಗಳಲ್ಲಿ ಇಲ್ಲವೆಂಬಂತಿರದೆ ಸದಾ ಸರ್ವಕಾಲಗಳಲ್ಲೂ ಅನುಸರಿಸಿರುವುದು. ಇದು ಶರೀರಗಳ ಆಧಾರಾಧೇಯ ಸಂಬಂಧ. ಮತ್ತು ಜಾಗ್ರದವಸ್ಥೆಯಲ್ಲಿ ಒಳಗಿರುವ ಆತ್ಮನ ಸಂಕಲ್ಪಶಕ್ತಿಯಿಂದಲೇ ಕೆಳಗೆ ಬೀಳದೆ ನಿಂತಿರುವುದು. ಶರೀರವು ಆತ್ಮನ ನಿಯಮನದಂತೆಯೇ ಕಾರ್ಯಮಾಡುವುದರಿಂದ ನಿಯತ ನಿಯಾಮ್ಯವು, ಆತ್ಮನ ಪುಣ್ಯಪಾಪ ಕರ್ಮಫಲಗಳಾದ ಸುಖದುಃಖಾನುಭವಗಳಿಗಾಗಿಯೇ ಶರೀರವಿರುವುದರಿಂದ ಶರೀರವು ಆತ್ಮನಿಗೆ ನಿಯತ ಶೇಷವು. ಇದರಂತೆಯೇ ಚೇತನಾಚೇತನ ವಸ್ತುಗಳೆಲ್ಲವೂ ಈಶ್ವರ ಸಂಬಂಧದಿಂದ ತಮ್ಮ ಸ್ವರೂಪವನ್ನು ಪಡೆದು ಶಾಶ್ವತವಾಗಿದ್ದು ಅವನ ಸಂಕಲ್ಪಕ್ಕೆ ಕಟ್ಟುಬಿದ್ದು, ಅವನ ಲೀಲಾರಸ, ಭೋಗರಸ ಇತ್ಯಾದಿ ಅವನ ಪ್ರಯೋಜನಕ್ಕಾಗಿಯೇ ಇರುವುದರಿಂದ ಇವುಗಳೆಲ್ಲಾ ಈಶ್ವರನಿಗೆ ಶರೀರಗಳೆಂದು ಹೇಳಲ್ಪಡುವುವು. ಈ ಶರೀರ ಶರೀರಿಸಂಬಂಧವು ಪ್ರಪಂಚದಲ್ಲಿರುವ ಸಮಸ್ತ ಚರಾಚರ ಜಗತ್ತಿನಲ್ಲಿರುವ ಒಂದೊಂದು ವಸ್ತುವಿಗೂ ಇರುವುದೆಂಬ ವಿಷಯವು ಬೃಹದಾರಣ್ಯಕೋಪನಿಷತ್ತಿನ 5 ನೆ ಅಧ್ಯಾಯದ 7 ನೆ ಖಂಡ (ಬ್ರಾಹ್ಮಣ)ದಲ್ಲಿ 2 ರಿಂದ 23ನೆ ಶ್ಲೋಕದ ವರೆಗೂ ವಿಶದವಾಗಿ ಹೇಳಲ್ಪಟ್ಟಿರುವುದು.

"ಭಿನ್ನಾಃ ತತಃ ಚೇತನಾಃ" = ಜೀವಾತ್ಮರುಗಳೆಲ್ಲರೂ ಸ್ವತಃ ಬೇರೆಬೇರೆಯಾದವರು. ಈ ವಿಷಯವು ಹಿಂದೆಯೇ ಭೇದಶ್ರುತಿಗಳನ್ನು ಉದಾಹರಿಸಿದಾಗ ಹೇಳಿರುವುದು. 'ಸತ್ಯಾಸಂಸೃತಿರೀಶ ನಿಗ್ರಹಕೃತಾ'= ಈ ಜೀವಾತ್ಮರುಗಳಿಗೆ ಕರ್ಮದಿಂದುಂಟಾಗುವ ಪ್ರಕೃತಿ ಸಂಬಂಧವೇ ಸಂಸಾರವು, ಈ ಸಂಸಾರವು ಈಶ್ವರನ ನಿಗ್ರಹ ಸಂಕಲ್ಪದಿಂದುಂಟಾಗುವುದರಿಂದ ಇದು ಸತ್ಯ; ಸುಳ್ಳಲ್ಲ. ಆ ಪ್ರಕೃತಿ ಸಂಬಂಧದಿಂದುಂಟಾಗುವ ಆಸೆ, ದ್ವೇಷ, ಸುಖ, ದುಃಖಾದಿಗಳು ಮತ್ತು ಅವುಗಳ

ಅನುಭವಗಳು ವಾಸ್ತವವಾಗಿ ಉಂಟಾಗುವುದರಿಂದ ಅವು ಭ್ರಾಂತಿಯಲ್ಲ:

"ಮುಕ್ತಿಸ್ತು...ತದನುಭೂತಿತಾಖ್ಯಾ"= ಈಶ್ವರನಲ್ಲಿ ಚೇತನನು ಮಾಡುವ ಭಕ್ತಿಪ್ರಪತ್ತಿಗಳಲ್ಲಿ ಯಾವುದಾದರೊಂದರಿಂದ ಪರಮಪದವೆಂಬ (ವೈಕುಂಠ) ಲೋಕದಲ್ಲಿ ಈಶ್ವರನನ್ನು ಸೇರಿ ಅಲ್ಲಿ ಅವನನ್ನು ಅನುಭವಿಸುವುದು ಮೋಕ್ಷವು.

ಶ್ವೇತಾಶ್ವತರೋಪನಿಷತ್ತಿನಲ್ಲಿ ಈಶ್ವರನ ವಿಷಯವನ್ನು ಆರಂಭಿಸಿ "ಪತಿಂ ವಿಶ್ವಸ್ಯಾತ್ಮೇಶ್ವರಂ'(ಶ್ವೇ. 6–6) ಇತ್ಯಾದಿಯಲ್ಲಿ ಪರಮಾತ್ಮನು ಪ್ರಕೃತಿಗೂ ಜೀವಾತ್ಮರಿಗೂ ಪತಿ ಎಂದೂ ಸಂಸಾರಬಂಧಕ್ಕೂ ಮೋಕ್ಷವನ್ನು ಅನುಗ್ರಹಿಸುವುದಕ್ಕೂ ಅವನೇ ಕಾರಣನು ಎಂದೂ ಹೇಳಿರುವುದು. ಇದರಿಂದ ಈಶ್ವರನು ಜೀವರುಗಳಿಗೆ ಸಂಸಾರವನ್ನೂ ಮೋಕ್ಷವನ್ನೂ ಉಂಟುಮಾಡುವನು ಎಂದು ಸಿದ್ಧಿಸುವುದು.

ತಾನಹಂ ದ್ವಿಷತಃ ಕ್ರೂರಾನ್
ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯ ಜಸ್ರಮಶುಭಾ
ನಾಸುರೀಷ್ವೇವಯೋನಿಷು ॥
(ಭ.ಗೀ. 16–19)

ಎಂದರೆ ಲೋಕದಲ್ಲಿ ಯಾರು ಭಗವದ್ದ್ವೇಷಿಗಳಾಗಿರುವರೋ, ಭಗವದ್ಭಕ್ತರನ್ನು ದ್ವೇಷಿಸುವರೋ ಅವರನ್ನು ಸಂಸಾರದಲ್ಲಿ ತಳ್ಳುವೆನು. ಅದರಲ್ಲೂ (ಅಥವಾ) ಆಸುರಜನ್ಮದಲ್ಲಿ ತಳ್ಳುವೆನು–ಎಂದು ಹೇಳಿರುವುದರಿಂದಲೂ, "ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್" (ಭ. ಗೀ 12–7) ಎಂದರೆ ನನ್ನಲ್ಲಿ ಅತ್ಯಂತ ಭಕ್ತಿಯುಳ್ಳವರನ್ನು ಸಂಸಾರದಿಂದ ಬಿಡಿಸಿ ಮೋಕ್ಷವನ್ನು ಹೊಂದುವಂತೆ ಮಾಡುತ್ತೇನೆ ಎಂಬ ಭಗವದ್ವಾಕ್ಯವಿರುವುದರಿಂದ ಭಗವನ್ನಿಗ್ರಹದಿಂದ ಸಂಸಾರವೂ ಅನುಗ್ರಹದಿಂದ ಮೋಕ್ಷವೂ ಲಭಿಸುವುದು ಎಂದು ಸಿದ್ಧಿಸುವುದು. ಆದ್ದರಿಂದ ಭಗವನ್ನಿಗ್ರಹರೂಪವಾದ ಸಂಸಾರವು ಸತ್ಯವಾಗಿರಬೇಕು (ಅದ್ವೈತಿಗಳು ಹೇಳುವಂತೆ) ಅಸತ್ಯವೂ ಭ್ರಮೆಯೂ ಆಗಲಾರದು.

ತೈತ್ತಿರೀಯೋಪನಿಷತ್ತಿನಲ್ಲಿ ಆನಂದವಲ್ಲಿ ಪ್ರಕರಣದಲ್ಲಿ "ಬ್ರಹ್ಮವಿದಾಪ್ನೋತಿಪರಂ । ತದೇಷಾಭ್ಯುಕ್ತಾ । ಸತ್ಯಂಜ್ಞಾನಮನನ್ತಂ ಬ್ರಹ್ಮ । ಯೋವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ । ಸೋಶ್ನುತೇಸರ್ವಾನ್‌ಕಾಮಾನ್ ಸಹ । ಬ್ರಹ್ಮಣಾವಿಪಶ್ಚಿತೇ ॥ (ತೈ. ಆ. 1–2) ಎಂದರೆ ಭಗವದುಪಾಸನೆಯನ್ನು ಮಾಡುವವನು ಪರಮವ್ಯೋಮ (ಎಂದರೆ ವೈಕುಂಠ) ದಲ್ಲಿ ಪರಬ್ರಹ್ಮನನ್ನು ಸೇರಿ ಪರಬ್ರಹ್ಮಗುಣಾನುಭವವನ್ನು ಅನುಭವಿಸುವನು–ಎಂದು ಹೇಳಿರುವುದರಿಂದ ವೈಕುಂಠವನ್ನು ಸೇರಿ ಅಲ್ಲಿ ಭಗವಂತನನ್ನೂ ಅವನ ಕಲ್ಯಾಣಗುಣಗಳನ್ನೂ ಅನುಭವಿಸುವುದೇ ಮೋಕ್ಷವು ಎಂದು ಸಿದ್ಧಿಸುವುದು. ಇದರಿಂದ ಜೀವನೂ ಬ್ರಹ್ಮನೂ ಬೇರೆಬೇರೆ ಎಂಬ ಭ್ರಮೆಯೇ ಸಂಸಾರವೆಂದೂ ಜೀವಬ್ರಹ್ಮೈಕ್ಯದಿಂದ ಉಂಟಾಗುವ ಭ್ರಮ ನಿವೃತ್ತಿಯೇ ಮುಕ್ತಿಯು ಎಂಬ ವಾದವು ಶ್ರುತಿಸಮ್ಮತವಲ್ಲವೆಂಬುವುದು ಭಗವದ್ರಾಮಾನುಜಾಚಾರ್ಯರ ಅಭಿಪ್ರಾಯ.

ಈ ವೇದಾನ್ತ ಸಿದ್ಧಾನ್ತಗಳಲ್ಲಿ ಕಂಡುಬರುವ ವ್ಯತ್ಯಾಸಗಳಿಗೆ ಕಾರಣವೇನು ? :–

ವೇದಾನ್ತಸಿದ್ಧಾನ್ತವು ಆತ್ಮಸಾಕ್ಷಾತ್ಕಾರವನ್ನೂ ಬ್ರಹ್ಮಸಾಕ್ಷಾತ್ಕಾರವನ್ನೂ ಅನುಗ್ರಹಿಸುವುದೆಂದು ಅಧ್ಯಾಯದ ಆರಂಭದಲ್ಲಿ ಹೇಳಿದೆವು. ಈಗ ವಿಮರ್ಶಿಸಿದ ದ್ವೈತಾದ್ವೈತ ವಿಶಿಷ್ಟಾದ್ವೈತಗಳ ವಿವರಣಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ನೋಡುವಾಗ ಕೆಲವು ವಿಷಯಗಳನ್ನು ಚರ್ಚಿಸಬೇಕಾಗುವುದು.

ಈ ಮೂರು ಸಿದ್ಧಾನ್ತಗಳಲ್ಲಿ ಮೊದಲನೆಯದು (7ನೆ ಶತಮಾನದ್ದು) ಅದ್ವೈತಸಿದ್ಧಾನ್ತ. ಅದಕ್ಕೆ ಮೊದಲು ಭಾರತದಲ್ಲಿ ಬೌದ್ಧ, ಶಾಕ್ತೇಯ ಇತ್ಯಾದಿ ಮತಗಳು ಪ್ರಚಾರದಲ್ಲಿದ್ದವು. ಹನ್ನೊಂದನೆ ಶತಮಾನದಲ್ಲಿ ಭಗವದ್ರಾಮಾನುಜಾಚಾರ್ಯರ ಕಾಲದಲ್ಲಿ ಅದ್ವೈತ ಸಿದ್ಧಾನ್ತವೇ ವೇದಾನ್ತಸಿದ್ಧಾನ್ತವೆಂಬ ಹೆಸರಿನಿಂದ ಪ್ರಚಾರದಲ್ಲಿತ್ತು. ದ್ವೈತಸಿದ್ಧಾನ್ತವು ಹದಿಮೂರನೆ ಶತಮಾನದ್ದು. ಆ ಕಾಲದಲ್ಲಿ ಅದ್ವೈತ, ವಿಶಿಷ್ಟಾದ್ವೈತಗಳೆರಡೂ ವೇದಾನ್ತಸಿದ್ಧಾನ್ತಗಳೆಂಬ ಹೆಸರಿನಲ್ಲಿ ಭಾರತದಲ್ಲಿ ಪ್ರಚಾರದಲ್ಲಿದ್ದವು.

ವಿಶಿಷ್ಟಾದ್ವೈತ ಸಿದ್ಧಾನ್ತದಲ್ಲಿ ಅದ್ವೈತ ದರ್ಶನದ ಖಂಡನವು ವಿಶೇಷವಾಗಿ ಕಂಡುಬರುತ್ತದೆ. ಅದಕ್ಕೆ ಮುಖ್ಯಕಾರಣ ಆ ಕಾಲದಲ್ಲಿ ಜನರಲ್ಲಿ ಅದ್ವೈತಸಿದ್ಧಾನ್ತವೇ ನಿಜವಾದ ವೇದಾನ್ತಸಿದ್ಧಾನ್ತವೆಂಬ ಅಭಿಪ್ರಾಯವಿದ್ದುದರಿಂದ. ಅದ್ವೈತಸಿದ್ಧಾನ್ತವು ಪೂರ್ಣವಾಗಿ ಆಧಾರದ ಮೇಲೆ ಸ್ಥಾಪಿಸಿಲ್ಲವೆಂಬುದನ್ನು ಬೆಳಕಿಗೆ ತರುವ ಅಭಿಪ್ರಾಯದಿಂದ ವೇದಾನ್ತಶಾಸ್ತ್ರವನ್ನು ಪೂರ್ಣವಾಗಿ ಪರಿಶೀಲಿಸಿ ಅದ್ವೈತಸಿದ್ಧಾನ್ತದಲ್ಲಿ ವೇದವಿರುದ್ಧವಾದ ಅಭಿಪ್ರಾಯಗಳಿರುವುದನು ಎತ್ತಿತೋರಿಸಿದೆ, ವಿಶಿಷ್ಟಾದ್ವೈತಸಿದ್ಧಾನ್ತವು ಸಂಪೂರ್ಣವಾಗಿ ವೇದಾನ್ತದ ಅಭಿಪ್ರಾಯವೇ ಎಂಬುದನ್ನು ವಿವರಿಸಿ ತೋರಿಸುವಾಗ ಅದ್ವೈತ ಸಿದ್ಧಾನ್ತದಲ್ಲಿ ಕಂಡುಬರುವ ವ್ಯತ್ಯಾಸಗಳಿಗೆ ಕಾರಣವನ್ನು ಹೇಳಬೇಕಾಗಿ ಬಂದದ್ದರಿಂದ ಆ ಸಿದ್ಧಾನ್ತದ ನಿರ್ಧಾರಗಳನ್ನು ಖಂಡನೆ ಮಾಡಬೇಕಾದ ಸಂದರ್ಭವೊದಗಿತು ಎಂದೂ ಊಹಿಸಬಹುದು.

ಭಗವದ್ರಾಮಾನುಜಾಚಾರ್ಯರ ಕಾಲದಲ್ಲಿ, ಆದಿಶಂಕರಾಚಾರ್ಯರು ಹಿಂದೆ ಉಪದೇಶಿಸಿದ್ದ ಅದ್ವೈತದರ್ಶನದಲ್ಲೇ ಅವರ ಶಿಷ್ಯರಲ್ಲಿ ಮುಂದೆ ಅಭಿಪ್ರಾಯಭೇದಗಳೇರ್ಪಟ್ಟು ಮೂರುಪಂಗಡಗಳಾಗಿ ವಿಭಾಗವಾಗಿ ಶಾಂಕರ, ಭಾಸ್ಕರ, ಯಾದವಪ್ರಕಾಶಗಳೆಂಬ ಹೆಸರಿನಲ್ಲಿ ಮೂರು ಅದ್ವೈತ ತತ್ತ್ವಗಳು ಪ್ರಚಾರದಲ್ಲಿದ್ದವು. ಇದರಿಂದ ಆದಿಶಂಕರಾಚಾರ್ಯರ ಉಪದೇಶಗಳಲ್ಲೂ ಅವರ ಕಾಲಾನಂತರ ಕೆಲವು ವ್ಯತ್ಯಾಸಗಳೇರ್ಪಟ್ಟಿರಬಹುದೆಂದು ಶಂಕಿಸುವುದಕ್ಕೆ ಅವಕಾಶವಿದೆ. ಭಗವದ್ರಾಮಾನುಜಾಚಾರ್ಯರು ತಮ್ಮ ಸಿದ್ಧಾನ್ತವನ್ನು ಸ್ಥಾಪಿಸಿದಾಗ ಈ ಮೂರು ಅದ್ವೈತ ಸಿದ್ಧಾನ್ತಗಳನ್ನೂ ಚರ್ಚಿಸಿ ಅವುಗಳಲ್ಲಿರುವ ಅಭಿಪ್ರಾಯಗಳನ್ನು ಖಂಡಿಸಿರುವರು.

ದ್ವೈತದರ್ಶನದಲ್ಲಿ ಜೀವರುಗಳ ವಿಷಯದಲ್ಲಿ ಹೇಳಿರುವ ಅಷ್ಟೊಂದು ವಿಭಾಗಗಳಿಗೆ ಶ್ರುತಿಗಳಲ್ಲಿ ಆಧಾರವಿರುವಂತೆ ಕಾಣುವುದಿಲ್ಲ. ಇತಿಹಾಸ ಪುರಾಣಗಳಲ್ಲಿ ಅಲ್ಲಲ್ಲಿ ಈ ವಿಷಯವು ಕಂಡುಬರುವುದು. ಈ ಸಿದ್ಧಾನ್ತರೀತ್ಯಾ ಕೆಲವರಿಗೆ ಮುಕ್ತಿಗೆ ಅಧಿಕಾರವೇ ಇಲ್ಲದಂತೆ ತೋರುವುದು. ಶ್ರುತಿಗಳ ಛಾಯೆಯನ್ನು ನೋಡಿದರೆ ಎಲ್ಲರಿಗೂ ಮುಕ್ತಿಗೆ ಅಧಿಕಾರವಿರುವಂತೆ ತೋರುವುದು. ಆದರೆ ಅವರು ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡಬೇಕು. "ತ್ರೈಗುಣ್ಯವಿಷಯಾವೇದಾಃ" ಎಂಬಲ್ಲಿ ಹಿಂದೆ ಹೇಳಿದಂತೆ ಪ್ರಪಂಚದಲ್ಲಿ ಸತ್ತ್ವ ರಜ ಸ್ತಮೋಗುಣಗಳ ವಿವಿಧ ಮಿಶ್ರಣಗಳಿಂದ ಕೂಡಿದ ಜನರಿರುವರು ಎಂಬ ಒಂದು ನಿರ್ಧಾರಕ್ಕೆ ಬಂದೆವು. ಈ ಅಭಿಪ್ರಾಯವನ್ನು ಈ ಸಿದ್ಧಾನ್ತದಲ್ಲಿ ಸ್ವೀಕರಿಸಿ ಒಂದು ವಿದವಾದ ಜೀವಭೇದಗಳನ್ನು ಮಾಡಿರುವಂತೆ ತೋರುತ್ತದೆ. ಆಗಿನ ಕಾಲದ ಜನರ ಸ್ಥಿತಿಯನು ನೋಡಿ ಅವರನ್ನು ಸ್ವಲ್ಪ ಸ್ವಲ್ಪವಾಗಿ ಮೇಲಕ್ಕೆ ಎಳಿಸಿ ಮುಂದಕ್ಕೆ ತರುವುದು ಒಳ್ಳೆಯದೆಂಬ ಅಭಿಪ್ರಾಯದಿಂದ ಈ ವಿವಿದ ವಿಂಗಡಗಳನ್ನು ಮಾಡಿರುವಂತೆ ತೋರುತ್ತದೆ.

ಅದ್ವೈತಸಿದ್ಧಾನ್ತಿಗಳು ತಮ್ಮ ಸಿದ್ಧಾನ್ತದಲ್ಲಿ ವೇದವಿರುದ್ಧಗಳಾದ ವಿಷಯಗಳಿರುವುದಾಗಿ ಒಪ್ಪಿಕೊಳ್ಳದಿರಬಹುದು. ಅಥವಾ ಅವುಗಳಿಗೆ ಬೇರೆ ವಿಧದಲ್ಲಿ ಅರ್ಥನಿರ್ಣಯಗಳನ್ನು ಮಾಡಿರಬಹುದು. ಪ್ರಕೃತದಲ್ಲಿ ಈ ಗ್ರಂಥದಲ್ಲಿ ಆ ವಿಷಯದಲ್ಲಿ ಚರ್ಚೆ ನಮಗೆ ಅನವಶ್ಯಕ, ಆ ದರ್ಶನದಲ್ಲಿ ಪರಬ್ರಹ್ಮವೊಂದೇ ಸತ್ಯ ವಸ್ತು,

ಮಿಕ್ಕದ್ದೆಲ್ಲವೂ ಮಿಥ್ಯೆ, ಇಲ್ಲವೇ ಇಲ್ಲ, ಭ್ರಾನ್ತಿಯಿಂದ ಹಾಗೆ ತೋರುತ್ತದೆ ಆ ಭ್ರಾನ್ತಿ ನೀಗಿದ ಒಡನೆಯೇ 'ತಾನೇಬ್ರಹ್ಮ' ಎಂಬ ಅರಿವುಂಟಾಗಿ ಅವರಿಗೆ ತಾವಿರುವಲ್ಲೇ, ಈ ಲೋಕದಲ್ಲೇ ಮುಕ್ತಿ ದೊರಕುತ್ತದೆ ಎಂಬ ನಂಬಿಕೆಯಿಂದ ಬಹುಕಾಲದಿಂದಲೂ ಒಂದು ಪಂಗಡವಿರುವುದು ಎಂಬುದಿಷ್ಟೇಸಾಕು ನಮಗೆ. ಲೋಕದಲ್ಲಿರುವ ಇತರ ದರ್ಶನಗಳಂತೆ ಇದೂ ಒಂದು ದರ್ಶನ. ಲೋಕದಲ್ಲಿ ಎಲ್ಲರಿಗೂ ಅವರವರ ದರ್ಶನವೇ ಸರಿಯಾದದ್ದು ಎಂಬ ನಂಬಿಕೆಯು ಅನಾದಿವಾಸನಾರೂಪವಾಗಿ ಬಂದಿರುವುದರಿಂದ ಅಂಥವರೆಲ್ಲರೂ ಒಂದು ಪಂಗಡವಾಗಿರುವುದು ಲೋಕದಲ್ಲಿ ಸಹಜವೇ. ದ್ವೈತವಿಶಿಷ್ಟಾದ್ವೈತಗಳೂ ಇಂಥವೇ.

ಪ್ರಪಂಚದಲ್ಲಿ ಎಷ್ಟು ದರ್ಶನಗಳೂ ಮತಗಳೂ ಹಿಂದಿನಿಂದಲೂ ಇರುವುವೋ ಅವೆಲ್ಲವೂ ಅವಶ್ಯಕವೇ. ಅವರವರ ಕರ್ಮಗಳು ಗುಣಗಳಿಗನುಗುಣವಾಗಿ ಈ ದರ್ಶನಗಳೂ ಮತಗಳೂ ಪರಮಾತ್ಮನ ಸಂಕಲ್ಪದಿಂದಲೇ ಏರ್ಪಟ್ಟಿವೆ. ಆದರೆ ಮತಗಳ ಮಧ್ಯೆ ದ್ವೇಷಾಸೂಯೆಗಳು ಮಾತ್ರ ಇರಕೂಡದು. ಹಿಂದೆ ಹೇಳಿದಂತೆ ಈ ಮತದ್ವೇಷಗಳು ಭಾರತದಲ್ಲಿ ಮೊದಲು ಇರಲೇ ಇಲ್ಲ. ಮಹಮ್ಮದೀಯರು ಭಾರತದೇಶದಲ್ಲಿ ಧಾಳಿಮಾಡಿದಾಗ ಮೊದಲುಬಾರಿ ನಮ್ಮವರಿಗೆ ಮತದ್ವೇಷದ ಅನುಭವವಾಯಿತು. ಸ್ವಲ್ಪಕಾಲದ ಮೇಲೆ ಅದೂ ಶಾನ್ತವಾಯಿತು. ಭಾರತದಲ್ಲಿ ಈಗ ಎದ್ದು ಕಾಣುವ ಮತದ್ವೇಷಗಳಿಗೆ ಇಂಗ್ಲೀಷರು ಕಾರಣವೆನ್ನಬಹುದು. ಜನರ ಅನ್ಯೋನ್ಯಜೀವನವನ್ನೂ ಐಕಮತ್ಯವನ್ನೂ ಹಾಳುಮಾಡಿ ಪರಸ್ಪರ ಕಲಹವೇರ್ಪಡಿಸುವುದರಿಂದ (Devide and Rule Policy) ತಾವು ಇನ್ನಷ್ಟುಕಾಲ ಭಾರತದಲ್ಲಿ ನೆಲೆಸಿರಬಹುದೆಂದು ನೆನೆದು ಮೊದಲು ಹಿಂದುಗಳಿಗೂ ಮಹಮ್ಮದೀಯರಿಗೂ ಕಲಹವೇರ್ಪಡಿಸಿದರು. ಅನಂತರ ಬ್ರಾಹ್ಮಣರಿಗೂ ಬ್ರಾಹ್ಮಣೇತರರಿಗೂ, ಅನಂತರ ಹಿಂದುಗಳಿಗೂ, ಹರಿಜನರಿಗೂ, ಹೀಗೆ ಮತಮತಗಳ ಮಧ್ಯೆ, ಪಂಗಡ ಪಂಗಡಗಳ ಮಧ್ಯೆ ವಿಷದ್ವೇಷಗಳನ್ನೇರ್ಪಡಿಸಿದರು. ಇದೆಲ್ಲಾ ರಾಜತಂತ್ರ (Politics) ದ ಹೆಸರಿನಲ್ಲಿ ನಡೆಯಿತು. ಇಂಗ್ಲೀಷರು ಭಾರತವನ್ನು ಬಿಟ್ಟುಹೋದ ಮೇಲೂ ಜನರ ಸ್ವಾರ್ಥದಿಂದ ಈ ಕಲಹಗಳು ಈಗ ರಾಜತಂತ್ರ (Politics) ದ ಹೆಸರಿನಲ್ಲಿ ಉಳಿದುಕೊಂಡು ವಿವಿಧ ಪಂಗಡಗಳಾಗಿ ಬೆಳೆದು ದೇಶದ ಅಶಾಂತಿಗೆ ಕಾರಣವಾಗಿದೆ. ಇನ್ನು ನಮ್ಮ ಗ್ರಂಥವಿಷಯಕ್ಕೆ ಹಿಂತಿರುಗೋಣ.

(ಸಶೇಷ

# ಪುರಾಣಪ್ರಸಿದ್ಧ ಮೋತಕಪಲ್ಲಿ

ದಕ್ಷಿಣಮಧ್ಯ ರೈಲ್ವೆಯಲ್ಲಿ ವಾಡಿ ಸಿಕಂದರಾಬಾದ ಜಂಕ್ಷನ್‌ಗಳ ಮಧ್ಯದಲ್ಲಿ ಸೇಡಂ ಎಂಬ ಒಂದು ಇತಿಹಾಸ ಪ್ರಸಿದ್ಧ ಪಟ್ಟಣವಿದೆ. ಈಗ ಅದು ತಾಲೂಕು ಹೆಡ್‌ಕ್ವಾರ್ಟರ್ ಆಗಿಯು ಒಂದೆರಡು ಸಿಮೆಂಟ್ ಉದ್ದಿಮೆಗಳಿರುವ ನಗರವಾಗಿದೆ. ಅಲ್ಲಿಂದ ಗುರಮಿಟಕಲ್ ಹೋಗುವ ದಾರಿಯಲ್ಲಿ ಸುಮಾರು 50 ಕಿ. ಮಿ. ದೂರದಲ್ಲಿ ಮೋತಕಪಲ್ಲಿ-ಮೋತಕಂಪಲ್ಲಿ-ಮೋತಂಪಲ್ಲಿ-ಮೋಟಕಪಲ್ಲಿ ಮೊದಲಾದ ಹೆಸರುಗಳಿಂದ ಕರೆಯಿಸಿಕೊಳ್ಳುವ ಒಂದು ಹಳ್ಳಿ. ಮೋತಕಪಲ್ಲಿಯು ಪ್ರಸಿದ್ಧಿ ಹೊಂದಿರುವುದು ಅಲ್ಲಿಯ ಭೀಮಸೇನ ದೇವರ ಗುಡಿಯಿಂದ. ಅಲ್ಲಿಯ ಭೀಮದೇವರು ಸುತ್ತಮುತ್ತಲಿನ ನೂರಾರು ಕುಟುಂಬಗಳಿಗೆ ಕುಲದೈವವಾಗಿ ಅವರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಬಂದಿದ್ದಾನೆ. ಮೋತಂಪಲ್ಲಿ ಕರ್ನಾಟಕದ ಸೇಡಂ ತಾಲೂಕಿನಲ್ಲಿದ್ದರೂ ಅಲ್ಲಿಯ ಬಹುಪಾಲು ಜನರ ಮಾತೃಭಾಷೆ ತೆಲುಗು. ಅದಕ್ಕೆ ಕಾರಣವೆಂದರೆ ಮೋತಕಪಲ್ಲಿಯ ಪಕ್ಕದಲ್ಲಿ ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆಯ ಕೋಡಂಗಲ್ ತಾಲೂಕು ಪ್ರಾರಂಭವಾಗುತ್ತದೆ.

ಆ ಹಳ್ಳಿಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಕಾರ್ಯಕ್ಷೇತ್ರ ಭೀಮದೇವರಗುಡಿ. ದೇವಸ್ಥಾನವು ವಿಶಾಲವಾದ ಪ್ರಾಂಗಣ ಹೊಂದಿದೆ. ಪ್ರವೇಶಮಾಡುವ ಮಹಾದ್ವಾರದ ಮೇಲೆ ಪುರಾಣೇತಿಹಾಸದ ವಿವಿಧ ಸನ್ನಿವೇಶಗಳು ಕೆತ್ತಲ್ಪಟ್ಟಿವೆ. ದೇವಾಲಯ ಪ್ರವೇಶ ಮಾಡುತ್ತಲೇ ಎರಡೂ ಬದಿಗೆ ವಿಶಾಲವಾದ ಕಲ್ಲಿನ ಸ್ತಂಬ ಮತ್ತು ಛಾವಣಿಯಿಂದ ಅಲಂಕೃತವಾದ ಕಟ್ಟೆಗಳಿವೆ. ಅವನ್ನು ದಾಟಿ ಒಳಗೆ ಪ್ರವೇಶ ಮಾಡುತ್ತಲೇ ನಮ್ಮನ್ನು ತಾನೇತಾನಾಗಿ ಪ್ರದಕ್ಷಿಣೆ ಮಾಡಲು ಆಕರ್ಷಣೆ ಮಾಡುವ ಕೌತುಕಗಳೆಂದರೆ ದೇವಾಲಯದ ಸುತ್ತಲೂ ಭಕ್ತಾದಿಗಳಿಗೆ ಜಾತ್ರೆ ಮತ್ತು ವಿಶೇಷ ಉತ್ಸವಗಳಿಗೆ ಬಂದಾಗ ಇರಲು ಮಾಡಿದ ಪೌಳಗಟ್ಟೆ. ಇಂತಹ ಎರಡು ಪೌಳಿಗಳ ಮಧ್ಯದ ಗೋಡೆಯ ಮೇಲೆ ಅನುಕ್ರಮವಾಗಿ ಕೆತ್ತಲ್ಪಟ್ಟ ದಶಾವತಾರ ವಿಗ್ರಹಗಳಿವೆ. ಇಲ್ಲಿಯ ವೈಶಿಷ್ಟ್ಯವೆಂದರೆ ದಶಾವತಾರಗಳಲ್ಲಿ ಕೃಷ್ಣನಿಗಿಂತಲೂ ಮೊದಲು ಹಲಧಾರಿಯಾದ ಬಲರಾಮನನ್ನು ನೋಡಬಹುದು.

ದೇವಸ್ಥಾನದ ಮುಂಭಾಗದ ಎಡಭಾಗದಲ್ಲಿ ಒಂದು ಪುಷ್ಕರಿಣಿ ಇದೆ. ನೋಡಲು ಸುಂದರವಾಗಿವೆ ಪೆಂಡುಲಂ ಗಡಿಯಾರಾಕಾರದ್ದಾಗಿದ್ದು ಗಾತ್ರದಲ್ಲಿ ಅಷ್ಟೇನೂ ದೊಡ್ಡದಲ್ಲದೆ ಹೋದರೂ ನೀರು ಆಳವಾಗಿದ್ದು ಇಡೀ ವರ್ಷ ನೀರು ಇರುತ್ತದೆ. ಇತ್ತೀಚೆಗೆ ಅದನ್ನು ನೀರಾವರಿಗಾಗಿ ಉಪಯೋಗಿಸಿದಂತೆ ತಿಳಿಯುತ್ತದೆ. ಪುಷ್ಕರಿಣಿಯಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ಭಾಗೀರಥಿ ಸನ್ನಿಧಾನವಾಗುವುದು. ಆ ಸಮಯದಲ್ಲಿ ನೀರು ಬೆಳ್ಳಗಾಗುವುದೆಂದು ಅಲ್ಲಿಯ ನಿವಾಸಿಗಳ ಹೇಳಿಕೆ.

ದೇವಸ್ಥಾನದ ಮುಖ್ಯಮಂಟಪ ಊರಿನ ಮತ್ತು ದೇವಸ್ಥಾನದ ಪ್ರಾಂಗಣಕ್ಕಿಂತಲೂ ಸುಮಾರು ಐದಾರು ಅಡಿ ಎತ್ತರದ ಮೇಲಿರುವುದರಿಂದ ತುಂಬಾ ಸ್ವಚ್ಛವಾಗಿದೆ. ಮಂಟಪ ಅಷ್ಟೇನೂ ದೊಡ್ಡದಲ್ಲವಾದರೂ ಐತಿಹಾಸಿಕವೆಂದು ಗೊತ್ತಾಗುತ್ತದೆ. ಕಂಬಗಳ ಮೇಲೆ ಹೆಚ್ಚಿನ ಕುಸರಿ ಕೆಲಸವೇನೂ ಇಲ್ಲ. ಆದರೆ ಸುಭದ್ರವಾಗಿದೆ. ಇದು ಅಮರಶಿಲ್ಪಿ ಜಕ್ಕಣ್ಣನಿಂದ ನಿರ್ಮಿತವಾದದ್ದೆಂದು ವದಂತಿ ಇದೆ. ಇದನ್ನು ಕಾಕಲಿವಾರ ಸಂಸ್ಥಾನದ ಲಕ್ಷ್ಮಣಪ್ಪ ಕಟ್ಟಿಸಿರುವುದಾಗಿ ಹೇಳುತ್ತಾರೆ. ಕಪ್ಪುಶಿಲೆಯ ಭೀಮಸೇನದೇವರ ವಿಗ್ರಹವು ತುಂಬಾ ಸುಂದರ ಗಂಭೀರ ಮತ್ತು ಜಾಗೃತವಾದ ಮೂರ್ತಿಯಾಗಿದೆ. ಈ ವಿಗ್ರಹದ ಬಗ್ಗೆ ಹಲವಾರು ದಂತಕಥೆಗಳಿವೆ. ಊರಿನ ಜನ ಬೇರೊಂದು ವಿಗ್ರಹ ಮಾಡಿಸಿ ಪ್ರತಿಷ್ಠಾಪನೆ ಮಾಡಲು ಯತ್ನಿಸಿದಾಗ ವಿಗ್ರಹವು ಗರ್ಭಗುಡಿಯ ದ್ವಾರಕ್ಕಿಂತಲೂ ದೊಡ್ಡದಾದ ಪವಾಡವನ್ನು ಕೇಳಿದರೆ ನಿಜವೆನಿಸುತ್ತದೆ. ಏಕೆಂದರೆ ಈಗ ಗರ್ಭಗುಡಿಯ ಹೊರಗಡೆ ಬಲಭಾಗದಲ್ಲಿ ಒಂದು ಪ್ರತಿಷ್ಠಾಪನೆಗೆ ಅರ್ಹವಾದ ವಿಗ್ರಹವನ್ನು ನಾವು ಇಂದಿಗೂ ನೋಡಬಹುದು. ಇಂದು ಪೂಜೆಗೊಳ್ಳುತ್ತಿರುವ ಸಹಸ್ರಾರು ಜನರ ಭಕ್ತಿಗೆ ಪಾತ್ರನಾದ ಜ್ಞಾನಿಗಳಿಗೆ ಜ್ಞಾನದಾತನೆಂದು ಹೆಸರಾದ ಮುಖ್ಯಪ್ರಾಣನೇ ಭೀಮಸೇನ. ಪ್ರತಿಮೆ ನೋಡಿದೊಡನೆ ನಮ್ಮ ದೃಷ್ಟಿ ಅಲ್ಲಿಯೇ ಕೇಂದ್ರೀಕೃತವಾಗುವಂತಿದೆ. ಎದೆಯಲ್ಲಿ ಸಾಲಿಗ್ರಾಮವಿರುವುದು. ಇದರ ಬಗ್ಗೆಯೂ ಹಲವು ಪವಾಡಗಳಿವೆ. ಒಟ್ಟಿನಲ್ಲಿ ಮೂರ್ತಿ ಜಾಗೃತವಾಗಿದೆ. ಒಂದು ಕೈಯಲ್ಲಿ ಗದೆ ಇನ್ನೊಂದು ಕೈಯಲ್ಲಿ ಮಂದಾರಪುಷ್ಪವೆನ್ನಬಹುದಾದ ರೀತಿಯಲ್ಲಿಯ ಹೂವನ್ನು ಹಿಡಿದ ಮೂರ್ತಿಯ ನಿಂತ ಭಂಗಿ ತುಂಬಾ ಆಕರ್ಷಣೀಯವಾಗಿದೆ.

ಪೂರ್ವಕಾಲದಿಂದಲೂ ಒಂದು ಸಾಂಪ್ರದಾಯಿಕ ನಿಯಮದಂತೆ ಮೂರ್ತಿಗೆ ಶುಕ್ರವಾರ ರಾತ್ರಿ ಚನ್ನಾಗಿ ಎಣ್ಣೆ ಹಚ್ಚಿ ಶನಿವಾರ ಬೆಳಗ್ಗೆ ಅಭಿಷೇಕ ಮಾಡುತ್ತಾರೆ. ಶನಿವಾರ ವಿಶೇಷ ಪೂಜೆ ನಡೆಯುತ್ತದೆ. ವಿದ್ವಾಂಸರು ದ್ವೈತಮತಕ್ಕನುಗುಣವಾಗಿ ಹನುಮ–ಭೀಮ–ಮಧ್ವ ಎಂದೂ ಸ್ತುತಿ ಮಾಡಿದ್ದಾರೆ. ಸಂಸ್ಕೃತ ಮತ್ತು ಕನ್ನಡದಲ್ಲಿ ಮೋತಂಪಲ್ಲಿ ಮಹಾತ್ಮೆ ಬರೆದಿದ್ದಾರೆ. ದೇವಸ್ಥಾನದ ಗರ್ಭಗುಡಿಯಲ್ಲಿ ಇಂದಿಗೂ ಎರಡು ನಂದಾದೀಪಗಳು ಇಡೀ ವರ್ಷದಾದ್ಯಂತ ಬೆಳಗುತ್ತಿರುತ್ತವೆ. ಇವು ಇಂದ್ರನಿಂದ ಶಾಪಗ್ರಸ್ತರಾದ ಕಿಂಪುರುಷರು ಜ್ಯೋತಿರೂಪದಲ್ಲಿ ಭೀಮಸೇನನ ಸೇವೆಗೈಯುತ್ತಾ ತಮಗೆ ಎಣ್ಣೆ ಎರೆದ ಭಕ್ತರ ದುರಿತಗಳನ್ನು ನಿವಾರಿಸುತ್ತ ಇಂದ್ರನ ಆದೇಶದ ಮೇರೆಗೆ ಇರುವುದಾಗಿ ಭಕ್ತಕೋಟಿಯ ಬಲವಾದ ನಂಬುಗೆ. ಶ್ರೀಮನ್ನಾರಾಯಣನು ಲಕ್ಷ್ಮೀ ಸಮೇತನಾಗಿ

ಡಾ॥ ವಾಸುದೇವ ಅಗ್ನಿಹೋತ್ರಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರಂ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲು ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 200=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ (ಒಂದು ವರ್ಷಕ್ಕೆ) | ರೂ – 42=00 |
| ಶಾಶ್ವತ ನಿತ್ಯಾರ್ಚನೆ | ರೂ – 542=00 |

ಬಂದು ಇವುಗಳಿಗೆ ಎಣ್ಣೆ ಎರೆದಾಗ ಪುನಃ ಕಿಂಪುರುಷ ಜನ್ಮ ಪ್ರಾಪ್ತಿಯಾಗುವುದು, ಜ್ಯೋತಿರೂಪವಲ್ಲಿರುವ ರಾಕ್ಷಸ ಜನ್ಮ ಹೋಗುವುದು– ಎಂಬ ಪೌರಾಣಿಕ ಐತಿಹ್ಯ ಗ್ರಾಮದ ಸಾರ್ವಜನಿಕರ ನಂಬುಗೆಗೆ ಪಾತ್ರವಾಗಿದೆ.

ಮೋತಕಪಲ್ಲಿಯ ವಿಶೇಷ ಎಂದರೆ ನವರಾತ್ರಿಯಲ್ಲಿ ಊರಜನರು ತಮ್ಮ ತಮ್ಮ ಮನೆಗಳಲ್ಲಿ ನಂದಾದೀಪ ಬೆಳಗದೆ ಅವೆಲ್ಲವನ್ನು ಸಾಮೂಹಿಕವಾಗಿ ದೇವಸ್ಥಾನದಲ್ಲಿ ಬೆಳಗುತ್ತಾರೆ. ಹಾಗು ಇದೇ ಒಂಬತ್ತು ದಿನ ಆನೆ, ಕುದುರೆ, ನವಿಲು, ಮಾವಿನ ಕೊಂಬೆ ನೋಡಲಾದ ಬೇರೆ ಬೇರೆ ವಾಹನಗಳ ಮೇಲೆ ದೇವರ ಉತ್ಸವ ಮೂರ್ತಿಯನ್ನು ಊರಲ್ಲಿ ಮೆರವಣಿಗೆ ಮಾಡಿ ಭಜನೆಯೊಂದಿಗೆ ದೇವಸ್ಥಾನಕ್ಕೆ ಬಂದು ಭಕ್ತರು ಸಂತುಷ್ಟರಾಗುತ್ತಾರೆ

ಈ ಕ್ಷೇತ್ರದಲ್ಲಿ ವಿಶೇಷ ಅನುಷ್ಠಾನ, ಸೇವೆ, ಚಾತುರ್ಮಾಸ್ಯಾದಿಗಳನ್ನು ಮಾಡಿ ಭೀಮಸೇನ ದೇವರ ಕೃಪಾಕಟಾಕ್ಷಕ್ಕೆ ಪಾತ್ರರಾದ ಭಕ್ತರನ್ನು ನೋಡಿದಾಗ ಇದೊಂದು ಜಾಗೃತಸ್ಥಳ ಅಥವಾ ತಪಸ್ಸು ಮಾಡಲು ಅರ್ಹಸ್ಥಳವೆನ್ನುವುದು ತಿಳಿಯುತ್ತದೆ.

ಇಲ್ಲಿ ದೇವಸ್ಥಾನದ ವ್ಯವಸ್ಥೆಯನ್ನು ನೋಡಿಕೊಂಡು ಹೋಗಲು ವಿವಿಧ ಮತದ ಸದಸ್ಯರಿಂದೊಡಗೂಡಿದ ಭೀಮಸೇನ ಸೇವಾ ಸಮಿತಿ ಎಂಬೊಂದು ಸಮಿತಿ ಇದೆ. ದೇವಸ್ಥಾನದ ಪೂಜೆ ಮಾಧ್ವ ಬ್ರಾಹ್ಮಣರು ಎಂದರೆ ಪೂರ್ವಕಾಲದಿಂದ ಬಂದ ವಂಶಜರು ಮಾಡುತ್ತಾರೆ. ದರ್ಶನಾರ್ಥಿಗಳಿಗೆ ಭಕ್ತರಿಗೆ ಅರ್ಚಕರು ಮತ್ತು ಸಮಿತಿ ಸಾಕಷ್ಟು ಸಹಕಾರ ಮಾಡುವವರಾಗಿದ್ದಾರೆ. ದೇವಸ್ಥಾನಕ್ಕೆ ಸಂಬಂಧ ಪಟ್ಟ ವಿವರ ಕನ್ನಡ ತೆಲುಗು ಮತ್ತು ಸಂಸ್ಕೃತದಲ್ಲಿ ಮೋತಕಪಲ್ಲಿ ಮಹಾತ್ಮೆ ಎಂಬ ಚಿಕ್ಕ ಪುಸ್ತಕ ಲಭ್ಯವಿದೆ. ಕನ್ನಡದ ಲೇಖಕರಾದ ಶ್ರೀ ಚಿಕ್ಕೆರೂರ ಗೋವಿಂದಚಾರ್ಯರು ತಮ್ಮ ಪುಸ್ತಕದಲ್ಲಿ ಮುನ್ನುಡಿಯಲ್ಲಿ ಮೋತಕಪಲ್ಲಿಯ ವಿಷಯ ಸ್ವಾರ

(28ನೇ ಪುಟ ನೋಡಿ

# ಭೋಕ್ತೃವೂ ಆತನೇ ಭೋಜ್ಯನೂ ಆತನೇ

ಭಾರತೀಯ ಸಾಹಿತ್ಯದಲ್ಲಿ ಶೃಂಗಾರ ರಚನೆಗಳಿಗೇನೂ ಕೊರತೆ ಇಲ್ಲ. ಪ್ರಾಚೀನ ಸಾಹಿತ್ಯವನ್ನು ಅವಲೋಕಿಸಿದಾಗ ಶೃಂಗಾರ–ವೀರ–ಇವೆರಡೇ ಆ ಕಾಲದ ಕವಿಗಳನ್ನಾಕರ್ಷಿಸಿದ ರಸಗಳೆಂದು ಯಾರಾದರೂ ಊಹಿಸಬಹುದು. ಶೃಂಗಾರ ನಾಯಿಕೆಯರ ವರ್ಣನೆ ವಿಪುಲವಾಗಿ ನಡೆಸಿದ ಕಾವ್ಯಗಳು ನೂರಾರು ಸಾಕ್ಷಿಯಾಗಿವೆ – ಕೆಲವು ಕಾಲಾನಂತರ ಶೃಂಗಾರಕ್ಕೆ ಭಕ್ತಿಯ ರಸಲೇಪ ಕೊಡುವ ಪ್ರವೃತ್ತಿ ಜಾರಿಗೆ ಬಂದಂತೆ ಕಾಣುತ್ತದೆ. ಶೃಂಗಾರ ವರ್ಣನೆ ರುಚಿಯಾಗಿದ್ದರೆ ಸಾಲದು – ಶುಚಿಯಾಗಿಯೂ ಇರಬೇಕು. ಕಾವ್ಯಗಳಲ್ಲಿ ಅಷ್ಟಾದಶವರ್ಣನೆಗಳಿರಬೇಕೆಂಬ ಪ್ರಾಚೀನ ಲಾಕ್ಷಣಿಕರ ನಿಯಮ ಹಾಗಿರಲಿ. ವಾಗ್ಗೇಯಕಾರ ಶಿಖಾಮಣಿಗಳು ರಚಿಸಿದ ಸಂಗೀತ ಕೀರ್ತನೆಗಳಲ್ಲಿ ಸಹ ಶೃಂಗಾರಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಜಯದೇವನ ಗೀತಗೋವಿಂದ ಇದಕ್ಕೆ ಪ್ರೋಜ್ಜ್ವಲ ನಿದರ್ಶನ. ರಘುಕುಲತಿಲಕ–ಯದುಕುಲತಿಲಕ ಇವರಿಬ್ಬರ ಬಗ್ಗೆ ರಚಿತವಾಗಿರುವ ವಿಪುಲ ಸಾಹಿತ್ಯದಲ್ಲಿ ಯದುನಾಥನ ಕಥೆಯೆಲ್ಲ ಶೃಂಗಾರ ಲೀಲಾವೈಭವವೇ ಆಗಿದೆ.

ರಸೋ ವೈ ಸಃ ಎಂದು ಪರಬ್ರಹ್ಮತತ್ತ್ವದ ಬಗ್ಗೆ ಆಡಿರುವ ಮಾತು ಭಾರತೀಯ ಮನೀಷಿಗಳ ಚಿನ್ತನಧಾರೆ ಯಾವ ಭವ್ಯತರ ಮಟ್ಟದಲ್ಲಿ ಹರಿದಿದೆ ಎನ್ನುವುದಕ್ಕೆ ನಿದರ್ಶನವಾಗಿದೆ.

ಸೃಷ್ಟಿಯಲ್ಲಿ ಆನಂದ–ವೈಭವ ತುಂಬಿದೆ. ಆತನ ಆನಂದವೇ ಸೃಷ್ಟಿಗೆ ಮೂಲಕಾರಣವೆಂದಿದ್ದಾರೆ ಹಿರಿಯರು. ಆನಂದದಿಂದಲೇ ಸೃಷ್ಟಿ–ಸ್ಥಿತಿ–ಲಯಗಳು. ಕ್ಷೀರಾಬ್ಧಿ ಮಥನ-ತತ್ಫಲವಾಗುದಿಸಿ ಬಂದ ಅಮೂಲ್ಯವಸ್ತುಗಳು-ಮಾನವನ ಆನಂದಾಭಿಲಾಷೆಗೆ ಬೃಹತ್ ಪ್ರತಿಮೆಯಾಗಿದೆ. ಸಾಗರ ಸಂಜಾತೆಯಾದ ಸಿರಿದೇವಿ ಲಕ್ಷ್ಮಿ– ವೈಭವಕ್ಕೂ ಲಾವಣ್ಯಕ್ಕೂ – ಮಹಿಮೆ ಮಹತ್ವಗಳಿಗೂ ಆಡುಂಬೊಲವಾಗಿದ್ದಾಳೆ. ಪರಮಾತ್ಮ ಅವತರಿಸಿದಾಗ ಲಕ್ಷ್ಮಿಯೂ ಅವತರಿಸುತ್ತಾಳೆ. ಈ ಜಗದಾದಿ ದಂಪತಿಗಳ ರಮಣೀಯ ಗಾಥಾವಳಿ ಭಾರತೀಯ ಸಾಹಿತ್ಯದ ಜೀವಾಳವಾಗಿ ಬಂದಿದೆ

ಈ ಸಿರಿದೇವಿಯೇ ಅಲಮೇಲುಮಂಗಾದೇವಿ. 'ಕಮಲಾಕುಚ ಚೂಚುಕ ಕುಂಕುಮತೋ ನಿಯತಾರುಣಿತಾತುಲ ನೀಲತನೋವಾದ ಶ್ರೀನಿವಾಸ,' ತನ್ನ ಉಪಯೋಗಕ್ಕೆಂದು ಅದೆಂತಹ ರಮ್ಯಾದ್ಭುತ ವಸ್ತುಗಳನ್ನು ಸೃಷ್ಟಿಸಿದ್ದಾನೆ!! ಸಂಗೀತಲೋಲನೂ ಶೃಂಗಾರ ಶೇಖರನೂ ಆದ ಶೇಷಾದ್ರೀಶನ ಅನಂತಲಾವಣ್ಯವನ್ನು ಕಮನೀಯ ಕವಿತೆಗಳಲ್ಲಿ ಹಾಡಿ ಧನ್ಯನಾದ ಪದಕವಿತಾಪಿತಾಮಹ ಅನ್ನಮಾಚಾರ್ಯ ತನ್ನ ಒಂದು ಕವಿತೆಯಲ್ಲಿ ಸ್ವಾಮಿಯನ್ನು ಭೋಕ್ತನಾಗಿ, ಭೋಜ್ಯನಾಗಿ ಕಂಡಿದ್ದಾನೆ. ಸೃಷ್ಟಿಕರ್ತನೂ ಆತನೆ. ಅನುಭವಿಸುವವನೂ ಆತನೆ. ಶೃಂಗಾರ ಮೂರ್ತಿಯನ್ನು ತಯಾರಿಸಿದವನೂ ಆತನೆ. ಅದರ ಲಾವಣ್ಯ ರಸಾಸ್ವಾದಿಯೂ ಆತನೆ– ಎಂದು ಕೊಂಡಾಡಿದ್ದಾನೆ.

ಅಲಮೇಲ್ಮಂಗಾದೇವಿಯ ಲಾವಣ್ಯ ಜಲಧಿಯಲ್ಲಿ ಉತ್ತಾಲತಾಲ ತರಲ ತರಂಗಾವಳಿಗಳೆಬ್ಬಿಸಲು ಗಗನ ಮಂಡಲದಲ್ಲಿ ವಿರಾಜಮಾನನಾಗಿರುವ ಚಂದ್ರ ಬಹುವಾಗಿ ಪ್ರಯತ್ನ ಪಟ್ಟಿದ್ದಾನೆ. ಆತನಿಗೊಂದು ಹಂಬಲ–ಈ ರೂಪರಾಶಿಯನ್ನು ಸಮೀಪದಿಂದ ಕಂಡು ಧನ್ಯನಾಗಬೇಕು. ಆದ್ದರಿಂದಲೇ ಆತ ಆಕೆಯ ಮುಖ ಮಂಡಲದಲ್ಲೇ ಬಂದು ನೆಲೆಸಿ ಧನ್ಯನಾಗಿರಬಹುದು!!

ಶ್ರೀನಿವಾಸನ ಪ್ರಿಯಪತ್ನಿಯಾದ ಅಲಮೇಲ್ಮಂಗಾದೇವಿಯ ಕೃಪಾಪೀಯೂಷ ಪಾನ ಪರಿಪುಷ್ಟನಾದ ಅನ್ನಮಯ್ಯ, ಪ್ರಿಯದರ್ಶನ ಅಪೇಕ್ಷೆಯ ಲೋಲ ಲಹರಿಗಳು ಆಕೆಯ ಹೃದಯಸಾಗರದಲ್ಲೇಳುತ್ತಿವೆ- ಎನ್ನುತ್ತಾನೆ. ಯೌವನ ಕ್ಷೀರಜಲಧಿಯಲ್ಲಿ ರೂಪಲಕ್ಷ್ಮಿ ಆವಿರ್ಭವಿಸಿದ್ದಾಳೆ ಎನ್ನುವಾಗಲಂತೂ ಈ ಭಕ್ತಕವಿಯ ಕಲ್ಪನಾ ಚಾತುರ್ಯ ಉತ್ತುಂಗ ಶಿಖರಕ್ಕೇರಿದಂತಿದೆ

ಭಾವ ಯೌವನ ಮಹಿಮ
ಪಾಲಜಲಧಿಲೋನ
ವಾವಸಾಕ್ಷಿಯೈನ ಯೌವನ ಲಕ್ಷ್ಮಿಗಲಿಗೆ

ಈ ಅಪೂರ್ವ ರಮಣೀಮೂರ್ತಿ ಶ್ರೀನಿವಾಸನಿಗಾಗಿಯೇ ಸೃಷ್ಟಿಸಲ್ಪಟ್ಟಳು. ಅನನ್ಯಸ್ಪೃಶ್ಯ ಲಾವಣ್ಯವನ್ನು ಶ್ರೀಹರಿ ಆಕೆಗೇಕೆ ದಯಪಾಲಿಸಿದ? ತನ್ನ ವೀಣಾನಾದಕ್ಕೆ ಕಾಣದೆ ತಾನೇ ಒಂದೊಂದು ಬಾರಿ ತಲೆದೂಗುತ್ತಾಳಂತೆ

ವೀಣಾವಾದನ ವೇಳಾಂ ಕಂಪಿತ ಶಿರಸಾಂ
ನಮಾಮಿ ಮಾತಂಗೀಮ್

ಎಂದಿದ್ದಾರೆ ಹಿರಿಯರು. ಬಹುಶಃ ಸ್ವಾಮಿಯೂ ಅಷ್ಟೇ – ತಾನೇ ಸೃಷ್ಟಿಸಿದ ಅನುಪಮ ಲಾವಣ್ಯ ಪುತ್ಥಳಿಯನ್ನು ತಾನೇ ಕಂಡು ಆನಂದಿಸುತ್ತಾನೆ. ಸೌಂದರ್ಯವೂ ಆತನೆ. ಸೌಂದರ್ಯದರ್ಶಕನೂ ಆತನೇ.

**ವಿದ್ವಾನ್ ಬ. ನ. ಗುಂಡೂರಾವ್**



ಸೌಂದರ್ಯ ಆರಾಧಕನೂ ಆತನೆ–ಆಸ್ವಾದಕನೂ ಆತನೇ!! ಆತನಿಗರ್ಪಿತವಾಗದೆ ಇದ್ದಲ್ಲಿ ಯಾವ ಸೌಂದರ್ಯತಾನೆ ಸಾರ್ಥಕವಾದೀತು??

ಸೌಂದರ್ಯ – ಸತ್ಯಗಳು ಭಗವದ್ರೂಪಗಳು. ಆತನು ರಸಾನಾಂ ರಸತಮಃ–ಆದ್ದರಿಂದಲೇ ನಾನಾ ರೂಪಗಳಲ್ಲಿ ತಾನೇ ಆವಿರ್ಭವಿಸಿ – ತಾನೇ ಸೃಷ್ಟಿಸಿದ ಸೌಂದರ್ಯವೆಲ್ಲ–ತನ್ನ ಅನಂತ ಶಕ್ತಿಯ ಕೇವಲ ಒಂದಂಶವೆಂದು ತಿಳಿಯಪಡಿಸುವುದು ತುಂಬ ಸೋಜಿಗದ ಸಂಗತಿ.

ಶ್ರೀನಿವಾಸನ ಪ್ರಿಯ ಪತ್ನಿಯಾದ ಪದ್ಮಾವತಿಯ ಸೌಂದರ್ಯಕ್ಕೆ ಬೇರಾವ ಉಪಮೆಯೂ ಇಲ್ಲ. ಶ್ರೀನಿವಾಸನ ಸೃಷ್ಟಿ ಕಲಾ ಚಾತುರ್ಯಕ್ಕೆ ಇನ್ನಾವ ಹೋಲಿಕೆಯೂ ಇಲ್ಲ.

ದಿಕ್ಕುತೋಚದೆ ಹೋದಾಗ ಮಾತಾಡಲು ಸಾಧ್ಯವಾಗದೆ ಮೌನ ವಹಿಸುವುದು ಸರ್ವವಿದಿತ ಸಂಗತಿ. ಭಕ್ತಕವಿ ಅನ್ನಮಾಚಾರ್ಯ ಈ ಸಿದ್ಧಾಂತವನ್ನು ತಿರುವೇಂಕಟಾಧೀಶ್ವರನಿಗೂ ಅನ್ವಯಿಸಿ ಒಂದು ಕಮನೀಯ ಕವಿತೆ ಬರೆದಿದ್ದಾನೆ. ವೆಂಕಟೇಶ್ವರನಿಗೆ ಇಬ್ಬರು ಪತ್ನಿಯರು– ಶ್ರೀದೇವಿ – ಭೂದೇವಿ. ಒಬ್ಬಾಕೆ ವಾಚಾಳಿ, ಭೂದೇವಿ ಗಂಭೀರೆ. ಶ್ರೀದೇವಿ ವಾಕ್‌ಚತುರೆ. ಆಕೆ ಆಗಾಗ ಪ್ರಶ್ನೆಮಾಡುವುದುಂಟಂತೆ!!– ನಿಮಗೆ ಎಲ್ಲ ಕಡೆಯಿಂದ ಕಾಣಿಕೆಗಳು ತಪ್ಪದೆ ಬರುತ್ತಿವೆ ತಾನೆ? ನೀವು ರಸಿಕ ಶಿಖಾಮಣಿಗಳು. ನಿಮ್ಮ ಸೌಂದರ್ಯ ಲೀಲಾವಿಲಾಸ ವಿಭ್ರಮಗಳಿಗೆ ಆಕರ್ಷಿತಳಾದ ಪ್ರಿಯೆಯೊಬ್ಬಳು ಅರ್ಪಿಸಿದ ಅಧರಾಮೃತನೈವೇದ್ಯ – ಕಡೆನೋಟದ ಕಾಣಿಕೆ– ಮುಗುಳ್ನಗೆಯ ಸುಮಮಾಲೆ– ಎಲ್ಲವನ್ನೂ ತಾವು ಸ್ವೀಕರಿಸೋಣವಾಗಿದೆ ತಾನೆ? ಕರ್ಣಸನ್ನೆಯ ತಾಂಬೂಲವನ್ನಾಕೆ ಅರ್ಪಿಸಿದಳಲ್ಲವೆ? ಆಕೆಯ ಮೇಲೆ ತಮ್ಮ ಕೃಪಾದೃಷ್ಟಿ ಹರಿಯಿತೆ? ನಿಮಗಾಕೆ ಸಲ್ಲಿಸುವುದೆಲ್ಲ ಮಾನಸಪೂಜೆ. ನನ್ನದು ಕಾಯ ವಾಚಾ ಮನಸಾ ಸಮರ್ಪಣೆ– ಎಂಬುದು ತಮಗೆ ನೆನಪಿರಲಿ. ಈಗ ಹೇಳಿಸ್ವಾಮಿ, ತಮಗೆ ಯಾವ ಕಾಣಿಕೆ ಹಿತ? ಉದ್ವಿಗ್ನ ಮನಸ್ಸಿನಿಂದ ನಾನು ಸಮರ್ಪಿಸಿದ ನಿಟ್ಟುಸಿರು, ಆವೇಗದಿಂದಾಗಿ ಕರಗಿ ಹರಿವ ನನ್ನ ಹಣೆಯ ಕುಂಕುಮಧಾರೆ– ಅಸಮಾಧಾನ ಪಟ್ಟ ನನ್ನ ಮನಸ್ಸಿನ ಭಾವ ಕುಸುಮ ಧಾರೆ– ಅಸಮಾಧಾನ ಪಟ್ಟ ನನ್ನ ಮನಸ್ಸಿನ ಭಾವ ಕುಸುಮಗಳು... ಇವೆಲ್ಲ ನಿಮಗೆ ತಲುಪಿತೇನು? ಅಥವ ಸಂದಾಯವಾದ ಹಣದೆಣಿಕೆಯಲ್ಲಿ ತಲ್ಲೀನರಾದ ನಿಮಗೆ ನನ್ನ ಆಸೆ ಆಕಾಂಕ್ಷೆಗಳು ಅರ್ಥವಾಗಲಿಲ್ಲವೋ?

ಈ ಪ್ರಶ್ನಾವಳಿಗೆ ಶ್ರೀನಿವಾಸ ಉತ್ತರ ಕೊಡಲಾರದೆ ಸುಮ್ಮನೆ ನಿಂತಿದ್ದಾನೆ– ಎಲ್ಲರಿಗೂ ಸೇರಿದ ವಸ್ತುವನ್ನು ಈಕೆ ತನ್ನ ಹಿಡಿತದಲ್ಲಿಟ್ಟುಕೊಳ್ಳ ಬಯಸುವಳಲ್ಲಾ– ಇದೆಂತಹ ವಿಚಿತ್ರ– ಎಂದು ಮನಸ್ಸಿನಲ್ಲಿ ಆಲೋಚಿಸುತ್ತ!! ಹೀಗೆ ನಿರುತ್ತರನಾಗಿ ನಿಂತ ಶ್ರೀನಿವಾಸನನ್ನು ಕುರಿತು ಅನ್ನಮಾಚಾರ್ಯನಿಗೆ ನಗು ಬರುತ್ತದೆ.

ನವ್ವವಚ್ಚೆ ನಿನ್ನ ಜೂಚಿ

ಎಂದು ವೀಣಾಧರಿ ರಾಗದಲ್ಲಿ ಒಂದು ಕೀರ್ತನೆಯನ್ನೇ ಹಾಡಿದ್ದಾನೆ!!

ಅನ್ನಮಾಚಾರ್ಯ ಆಡಿದ ಮಾತೆಲ್ಲ ಅಮರ ಕಾವ್ಯವಾಯ್ತು. ಅಂತಹ ರಸಸಿದ್ಧ ಕವಿಯಾತ. ಅನ್ನಮಾಚಾರ್ಯನ ಸಾಹಿತ್ಯವೆಲ್ಲ ಆ ಪಾದ ಮಧುರ ಸಂಗೀತ. ಅಧ್ಯಾತ್ಮ ಕೀರ್ತನೆಗಳು – ಶೃಂಗಾರ ಕೀರ್ತನೆಗಳು– ಎಂದು ಈತನ ಸಾಹಿತ್ಯವನ್ನು ಎರಡು ಭಾಗ ಮಾಡಬಹುದು. ಮಕರಂದಕ್ಕಿಂತಲೂ ಮಧುರವಾದ ಭಾವನೆಗಳು, ನವನೀತಕ್ಕಿಂತ ಮೃದುವಾದ ಭಾವನೆಗಳು, ಅಮೃತಕ್ಕಿಂತಲೂ ರುಚಿಯಾದ ಭಕ್ತಿಭಾವಾನುರಕ್ತಿ- ಇದು ಅನ್ನಮಾಚಾರ್ಯನಶಕ್ತಿ. ಬಹುಶಃ ಸಂಗೀತ ಸಾಹಿತ್ಯಗಳೇತನಿಗೆರಡು ಶ್ವಾಸಕೋಶಗಳಿರಬಹುದೇನೊ!! ಆದ್ದರಿಂದಲೇ ಈತನ ಪ್ರತಿಯೊಂದು ಕೀರ್ತನೆಯೂ ರಸಕೋಶವಾಗಿದೆ–ರಸಸ್ಯಂದಿಯಾಗಿದೆ.

ಷೋಡಶಕಳಾನಿಧಿಯಾದ ಶ್ರೀನಿವಾಸನಿಗೆ ಈ ಭಕ್ತಕವಿ ತನ್ನ ಕೃತಿಗಳಿಂದಲೇ ಷೋಡಶೋಪಚಾರ ಪೂಜೆ ಮಾಡಿದ್ದಾನೆ. ಕೃತಿಗಳೇ ಕುಸುಮಗಳು – ಭಾವಗಳೇ ಮಂತ್ರಗಳು. ವಿಶ್ವಾತ್ಮಕನಿಗೆ ಆವಾಹನ, ಸರ್ವನಿಲಯನಿಗೆ ಸಿಂಹಾಸನ, ಗಂಗಾಜನಕನಿಗರ್ಘ್ಯಪಾದ್ಯಗಳು – ಕ್ಷೀರಾಬ್ಧಿಶಯನನಿಗೆ ಕ್ಷೀರ ಅಭಿಷೇಕ- ಈ ಎಲ್ಲ ಕೈಂಕರ್ಯಗಳನ್ನು ಮಾಡಿರುವ ಅನ್ನಮಾಚಾರ್ಯ ರಸೋನ್ಮಾದದಿಂದ ಮೈಮರೆತು ಹೇಳುತ್ತಾನೆ–

ಇದಿಗಾಕ ಸೌಭಾಗ್ಯಮಿದಿಗಾಕ
ತಪಮು ಮರಿ
ಇದಿಗಾಕ ವೈಭವಂ –
ವೇರೊಕಟಿಗಲದಾ?

ತೆಲುಗಿನ ಈ ಮಾತು ನೋಡಿದಾಗ ಪುರಂದರದಾಸರ - ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯಾ – ಎಂಬ ಮಾತು ನೆನಪಾಗುತ್ತದೆ. ತಿರುವೇಂಕಟನಾಥನನ್ನು ಯಾರೆಷ್ಟು ಅರ್ಥಮಾಡಿಕೊಂಡರೂ– ಸಂಪೂರ್ಣವಾಗರಿತವರಾರೂ ಇಲ್ಲವಷ್ಟೆ!! ಆ ಬ್ರಹ್ಮಾರ್ಚಿತ ಶ್ರೀಪಾದಗಳ ಮಹಿಮೆಯನ್ನು ಕುರಿತು ಆಲೋಚನೆ ಮಾಡುತ್ತ ಹೋಗುವುದು – ಆನಂದಪಡುತ್ತ ಹೋಗುವುದು– ಇದೇ ಭಕ್ತಕವಿಯ ಜೀವನ. ಶ್ರೀನಿವಾಸ ತನ್ನ ರಹಸ್ಯವನ್ನು ಯಾರಿಗೂ ಬಿಟ್ಟುಕೊಡುವುದಿಲ್ಲ. ದೈವೀ ರಹಸ್ಯ ಯಾರಿಗೂ ಅರ್ಥವಾಗುವುದಿಲ್ಲ. ಯಾರಿಗೂ ಅರ್ಥವಾಗಬಾರದು- ಅಂತಹ ಮಾಯೆ ಬೀಸಿದ್ದಾನೆ ಸ್ವಾಮಿ. ಆದ್ದರಿಂದಲೇ ಕವಿವಾಣಿ ಹೀಗೆ ಉದ್ಘೋಷಿಸಿದೆ.

ಎಂತ ಮಾಯಲವಾಡು
ಎಂಚಿ ಚೂಡಗವೀಡು ||

★

---

(26 ನೇ ಪುಟ ದಿಂದ)

ಪುರಾಣದಲ್ಲಿ ಬರುವುದಾಗಿ ಉಲ್ಲೇಖ ಮಾಡಿದ್ದಾರೆ. ಮತ್ತು ಪ್ರಾಣವೆಂಕಟ ಎಂಬ ಅಂಕಿತದಿಂದ ರಚಿತವಾದ ಕನ್ನಡ ಹರಿದಾಸರ ತ್ರಿಕಾಳದಲ್ಲಿ ರಚಿತವಾದ ಮೂರು ನುಡಿಯ ಕೀರ್ತನೆಯೊಂದನ್ನು ಪ್ರಕಟಿಸಿದ್ದಾರೆ. ಗ್ರಂಥಾಂತ್ಯದಲ್ಲಿ ಭೀಮಸೇನ ದೇವರ ದಶ ಪವಾಡಗಳನ್ನು ವಿವರಿಸಿದ್ದಾರೆ ಮಾರ್ಗಶಿರ ಹುಣ್ಣಿಮೆ ಜಾತ್ರೆಯಾಗುತ್ತದೆ ಮತ್ತು ರಥಸಪ್ತಮಿಯಂದು ಹೂವಿನ ತೇರು ತುಂಬಾ ಸುಂದರವಾದ ದೃಶ್ಯ ಇವೆರಡೂ ಕ್ಷೇತ್ರದ ಅತಿದೊಡ್ಡ ಕಾರ್ಯಕ್ರಮಗಳಾಗಿವೆ. ★

# ಮುಗ್ವೆಯ ಸುಬ್ರಹ್ಮಣ್ಯಸ್ವಾಮಿ

ದುಷ್ಟ ದಾನವರನ್ನು ಸಂಹರಿಸಿ ಶಿಷ್ಟ ಮಾನವರನ್ನು ಪರಿಪಾಲಿಸಲು ದೇವತೆಗಳು ತಮ್ಮನ್ನು ತಾವೇ ಪ್ರೇರಿಸಲಾಗಿಸಿರುವ ವಿಷಯ ನಾವು ಪುರಾಣ ಮುಖೇನ ಅರಿಸುತ್ತಿದ್ದೇವೆ. ಈ ನಿಟ್ಟಿನಲ್ಲಿ ಪಯಣಿಸುತ್ತಿದ್ದವರೆಂದರೆ ಲೋಕಾನುಗ್ರಹಾಪೇಕ್ಷಿ ತ್ರಿಲೋಕ ಸಂಚಾರಿಯಾದ ನಾರದ ಮಹರ್ಷಿಯವರೊಬ್ಬರು.

ದೇವರ್ಷಿಯಾದ ನಾರದರು ಗೋಕರ್ಣ ಕ್ಷೇತ್ರಯಾತ್ರೆಯನ್ನು ಮುಗಿಸಿ ದೈವೇಚ್ಛೆಯಂತೆ ಆಕಾಶಮಾರ್ಗವಾಗಿ ಸಂಚರಿಸುತ್ತ ನೂರು ಯೋಜನ ದೂರದಲ್ಲಿ ಶರಾವತಿಯ ನದಿಯ ಉತ್ತರಕ್ಕೆ ಇರುವ ಪಾವನ ತಾಣವಾದ ದಕ್ಷಿಣ ನಾಸಿಕಾ ಕ್ಷೇತ್ರ ಮುಗ್ವೆಗೆ ಬಂದಿಳಿದರು. ಕ್ಷೇತ್ರಾಧೀಶ್ವರನಾದ ಶ್ರೀ ಗೋಪಾಲಕೃಷ್ಣನ ದರ್ಶನವನ್ನು ಪಡೆದು ಅವನ ಗುಣಗಾನ ಗೈಯ್ಯುತ್ತ ಭಕ್ತಿಭಾವದಿಂದ ವಂದಿಸಿದರು.

ಅನುಪಮ ಮನಃಶಾಂತಿ ನೀಡಿ ಮಾನಸಿಕ ಕ್ಲೇಶವನ್ನು ಪರಿಹರಿಸುವ ಈ ಪಾವನ ತಾಣ ಕಾಂಗು ತೆಂಗು ಮಾವು ಮೊದಲಾದ ವೃಕ್ಷಗಳಿಂದ ಆವರಿಸಿದ ವನದಿಂದ ಕಂಗೊಳಿಸುತ್ತಿತ್ತು. ಪಕ್ಷಿಗಳ ಇಂಚರ ಹಾಗೂ ಶಾಂತತೆಯನ್ನು ಕದಡದೇ ಮೌನವಾಗಿ ಬೀಸುತ್ತಿದ್ದ ವಾಯುವನ್ನು ಕಂಡ ಮಹರ್ಷಿಗೆ ಈ ತಾಣದ ಮಹಿಮೆ ಅಪಾರವೆಂಬ ಅರಿವಾಯಿತು

## ನಾರದ ಪ್ರತಿಷ್ಠಾಪಿತ ಸುಬ್ರಹ್ಮಣ್ಯ:

ಮುಗ್ವೆಯ ತಪೋ-ವನದಲ್ಲಿ ಹವನ ಯಜ್ಞಯಾಗಾದಿಗಳನ್ನು ನೆರವೇರಿಸುತ್ತಿರುವ ಋಷಿವರೇಣ್ಯರಿಗೆ ದಾನವರಿಂದ ಆಗುತ್ತಿರುವ ಉಪಟಳದ ವೃತ್ತಾಂತ ನಾರದಮಹರ್ಷಿಗೆ ದೈವೀ ಪ್ರೇರಣೆಯಿಂದ ತಿಳಿದು ಬಂದಿತು. ಅವರ ಸಂಹಾರದ ಅವಶ್ಯಕತೆಯನ್ನು ಮನಗಂಡರು ಆ ನಾರದ ಮುನಿ.

“ಹೇ ಉದಾರ ಹೃದಯದವನೇ ಲೋಕೋಪಕಾರಾರ್ಥವಾಗಿ ಶುಭಮುಹೂರ್ತದಲ್ಲಿ ಈ ಪುಣ್ಯಕ್ಷೇತ್ರದಲ್ಲಿ ಋಷಿವರೇಣ್ಯರ ಸಂರಕ್ಷಣೆಗಾಗಿ ಶ್ರೀ ಸುಬ್ರಹ್ಮಣ್ಯೇಶ್ವರನ ಮೂರ್ತಿಯನ್ನು ವಿಧಿವತ್ತಾಗಿ ಸ್ಥಾಪಿಸು” ಎಂಬ ದೈವೀ ವಾಣಿ ನಾರದರನ್ನು ಪ್ರೇರೇಪಿಸಿತು.

ದೇವವಾಣಿ ಮುಗಿಯುತ್ತಲೇ ನಾರದರು ಮುಚ್ಚಿದ ಕಣ್ಣು ತೆರೆದು ನೋಡಿದಾಗ ಅವರ ಎದುರು ಏಕಮುಖ, ದ್ವಿಹಸ್ತಗಳಿಂದ ಕಂಗೊಳಿಸುವ ನಯನ ಮನೋಹರವಾದ ಷಣ್ಮುಖನ ಮೂರ್ತಿಯೊಂದು ಗೋಚರಿಸಿತು. ಷಡ್ಮುಖಗಳಿರದೇ ಏಕಮುಖವಾಗಿರುವ ಸುಬ್ರಹ್ಮಣ್ಯನ ವಿಗ್ರಹ ಪ್ರತಿಷ್ಠಾಪನೆ ಗೈಯಲು ನಾರದರ ಸಂಶಯಕ್ಕೆ ಇಂಬು ಕೊಟ್ಟಿತು. ಇದು ಬಾಲ ಸುಬ್ರಹ್ಮಣ್ಯನ ವಿಗ್ರಹ ಎಂದು ನಾರದರಿಗೆ, ಸಂಶಯದಿಂದ ದೂರ ಇರಲು ಅಶರೀರವಾಣಿಯಾಯಿತು. ಆಗ ಬಾಲಸುಬ್ರಹ್ಮಣ್ಯನ ವಿಗ್ರಹವನ್ನು ಮುಗ್ವೆಯಲ್ಲಿ ಸ್ಥಾಪಿಸಲು ನಾರದರು ಅಣಿಯಾದರು.

ಕಾರ್ತಿಕ ಶುಕ್ಲ ಪ್ರತಿಪದೆ ಗೋಕರ್ಣ ಕ್ಷೇತ್ರದಲ್ಲಿ ಶ್ರೀಮಹಾಬಲೇಶ್ವರನು ಪ್ರತಿಷ್ಠೆಯಾದ ಸುದಿನ ವಿಶಾಖಾ ನಕ್ಷತ್ರದ ಗುರುವಾರದ ಶುಭ ಮುಹೂರ್ತ ಎಂದು ನಾರದ ಮುನಿಗಳು ನಿಗದಿ ಪಡಿಸಿ ಅಂದು ಸುಬ್ರಹ್ಮಣ್ಯನ ವಿಗ್ರಹವನ್ನು ಪ್ರತಿಷ್ಠಾಪಿಸಿ ಬಾಲ ಸುಬ್ರಹ್ಮಣ್ಯ ಎಂದು ನಾಮಕರಣ ಮಾಡಿದರು.

ಶ್ರೀ ಆರ್.ಜಿ. ಶ್ಯಾನಭಾಗ

ಈ ಸುಮುಹೂರ್ತದಲ್ಲಿ ಸ್ವರ್ಗದಿಂದ ಇಂಪಾದ ಸಾಮಗಾನದ ಸುಧೆ ಪ್ರವಹಿಸಲಾರಂಭಿಸಿತು. ಮುನಿಗಳು ಪ್ರೀತಿಯಿಂದ ಸುಬ್ರಹ್ಮಣ್ಯನನ್ನು ಸಾಮಪ್ರಿಯನೆಂದು ಹೆಸರಿಸಿದರು. ನಾರದರು ಬ್ರಾಹ್ಮಣರ ನೆರವಿನಿಂದ ಒಂಭತ್ತು ದಿನಗಳ ವರೆಗೆ ಪಾಂಚರಾತ್ರ ವಿಧಿಯನ್ನು ಅನುಸರಿಸಿದರು. ಪ್ರತಿಷ್ಠಾ ಮಹೋತ್ಸವ ಅದ್ದೂರಿಯಿಂದ ನೆರವೇರಿತು. ಮುರುಗನಿಗೆ ಗಗನದಿಂದ ದಿವ್ಯ ಪುಷ್ಪದ ಮಳೆಯಾಯಿತು. ಪ್ರಸನ್ನಚಿತ್ತರಾದ ನಾರದರು ಮತ್ತಷ್ಟು ಪ್ರಸನ್ನಚಿತ್ತರಾದರು.

## ವಿಗ್ರಹದಲ್ಲಿ ಒಡಮೂಡಿದ ಸುಬ್ರಹ್ಮಣ್ಯ :

ಪ್ರತಿಷ್ಠಾ ಮಹೋತ್ಸವದ ಅಂತ್ಯದಲ್ಲಿ ನಾರದರು ಸುಬ್ರಹ್ಮಣ್ಯನನ್ನು ಮಾನಸ ಪೂಜೆಯಿಂದ ಆರಾಧಿಸಿದರು. “ಸುಬ್ರಹ್ಮಣ್ಯನೇ ನಿನಗೆ ವಂದನೆಗಳು, ನೀನು ಮಹೇಶ್ವರನು. ದಯಾಸಾಗರನು. ನಿನಗೆ ಭಕ್ತಿಗಿಂತ ಹೆಚ್ಚಿನ ಪ್ರಿಯ ವಸ್ತುವಿಲ್ಲ. ಭಕ್ತಿಗೂ ಸಿಲುಕದ ನಿನಗೆ ನಮಸ್ಕಾರ, ನಿನ್ನ ನಾಮವನ್ನು ಭಕ್ತಿಯಿಂದ ಭಜಿಸುವುದರಿಂದ ಪಾಪ ನಾಶವಾಗುವುದು. ಭಕ್ತರ ಬಯಕೆಯನ್ನು ಸಿದ್ಧಿಸುವ ಕಾಮದೇನು. ಕಾರ್ತಿಕೇಯನಿಗೆ ನಮೋ ನಮಃ. ಎಂದು ನಾರದರು ಗುಣಗಾನ ಗೈಯುತ್ತಿದ್ದಂತೆ ಭಕ್ತ ವತ್ಸಲ ಭಗವಾನ್ ಸುಬ್ರಹ್ಮಣ್ಯನು ಭಕ್ತರಿಗೆ ಸದಾ ದರ್ಶನವನ್ನೀಯಲು ಮೂರ್ತಿಯಲ್ಲಿ ಜೀವ ಕಳೆಯಾಗಿ ಒಡಮೂಡಿದನು.

ಮೂರ್ತಿಯಲ್ಲಿ ಪಡಿಮೂಡಿದ ಬಾಲ ಸುಬ್ರಹ್ಮಣ್ಯನು ಅಲ್ಲಿ ನೆರೆದಿರುವ ಭಕ್ತ ಭಜಕರು ಆಲಿಸುವಂತೆ ನಾರದನನ್ನು ಉದ್ದೇಶಿಸಿ ಹೀಗೆ ನುಡಿದನು.

# ಮುಗ್ವೆಯ ಸುಬ್ರಹ್ಮಣ್ಯಸ್ವಾಮಿ

ದುಷ್ಟ ದಾನವರನ್ನು ಸಂಹರಿಸಿ ಶಿಷ್ಟ ಮಾನವರನ್ನು ಪರಿಪಾಲಿಸಲು ದೇವತೆಗಳು ತಮ್ಮನ್ನು ತಾವೇ ಪ್ರಕಟಿಸಿರುವ ವಿಷಯ ನಾವು ಪುರಾಣ ಮುಖೇನ ಅರಿಯುತ್ತಿದ್ದೇವೆ. ಈ ನಿಟ್ಟಿನಲ್ಲಿ ಪಯಣಿಸುತ್ತಿದ್ದವರೆಂದರೆ ಲೋಕಾನುಗ್ರಹಾಪೇಕ್ಷಿ ತ್ರಿಲೋಕ ಸಂಚಾರಿಯಾದ ನಾರದ ಮಹರ್ಷಿಯವರೊಬ್ಬರು.

ದೇವರ್ಷಿಯಾದ ನಾರದರು ಗೋಕರ್ಣ ಕ್ಷೇತ್ರಯಾತ್ರೆಯನ್ನು ಮುಗಿಸಿ ದೈವೇಚ್ಛೆಯಂತೆ ಆಕಾಶಮಾರ್ಗವಾಗಿ ಸಂಚರಿಸುತ್ತ ನೂರು ಯೋಜನ ದೂರದಲ್ಲಿ ಶರಾವತಿಯ ನದಿಯ ಉತ್ತರಕ್ಕೆ ಇರುವ ಪಾವನ ತಾಣವಾದ ದಕ್ಷಿಣ ನಾಸಿಕಾ ಕ್ಷೇತ್ರ ಮುಗ್ವೆಗೆ ಬಂದಿಳಿದರು. ಕ್ಷೇತ್ರಾಧೀಶ್ವರನಾದ ಶ್ರೀ ಗೋಪಾಲಕೃಷ್ಣನ ದರ್ಶನವನ್ನು ಪಡೆದು ಅವನ ಗುಣಗಾನ ಗೈಯುತ್ತ ಭಕ್ತಿಭಾವದಿಂದ ವಂದಿಸಿದರು.

ಅನುಪಮ ಮನಃಶಾಂತಿ ನೀಡಿ ಮಾನಸಿಕ ಕ್ಲೇಶವನ್ನು ಪರಿಹರಿಸುವ ಈ ಪಾವನ ತಾಣ ಕಾಂಗು ತೆಂಗು ಮಾವು ಮೊದಲಾದ ವೃಕ್ಷಗಳಿಂದ ಆವರಿಸಿದ ವನದಿಂದ ಕಂಗೊಳಿಸುತ್ತಿತ್ತು. ಪಕ್ಷಿಗಳ ಇಂಚರ ಹಾಗೂ ಶಾಂತತೆಯನ್ನು ಕದಡದೇ ಮೌನವಾಗಿ ಬೀಸುತ್ತಿದ್ದ ವಾಯುವನ್ನು ಕಂಡ ಮಹರ್ಷಿಗೆ ಈ ತಾಣದ ಮಹಿಮೆ ಅಪಾರವೆಂಬ ಅರಿವಾಯಿತು

## ನಾರದ ಪ್ರತಿಷ್ಠಾಪಿತ ಸುಬ್ರಹ್ಮಣ್ಯ:

ಮುಗ್ವೆಯ ತಪೋವನದಲ್ಲಿ ಹವನ ಯಜ್ಞಯಾಗಾದಿಗಳನ್ನು ನೆರವೇರಿಸುತ್ತಿರುವ ಋಷಿವರೇಣ್ಯರಿಗೆ ದಾನವರಿಂದ ಆಗುತ್ತಿರುವ ಉಪಟಳದ ವೃತ್ತಾಂತ ನಾರದಮಹರ್ಷಿಗೆ ದೈವೀ ಪ್ರೇರಣೆಯಿಂದ ತಿಳಿದು ಬಂದಿತು. ಅವರ ಸಂಹಾರದ ಅವಶ್ಯಕತೆಯನ್ನು ಮನಗಂಡರು ಆ ನಾರದ ಮುನಿ.

“ಹೇ ಉದಾರ ಹೃದಯದವನೇ ಲೋಕೋಪಕಾರಾರ್ಥವಾಗಿ ಶುಭಮುಹೂರ್ತದಲ್ಲಿ ಈ ಪುಣ್ಯಕ್ಷೇತ್ರದಲ್ಲಿ ಋಷಿವರೇಣ್ಯರ ಸಂರಕ್ಷಣೆಗಾಗಿ ಶ್ರೀ ಸುಬ್ರಹ್ಮಣ್ಯೇಶ್ವರನ ಮೂರ್ತಿಯನ್ನು ವಿಧಿವತ್ತಾಗಿ ಸ್ಥಾಪಿಸು” ಎಂಬ ದೈವೀ ವಾಣಿ ನಾರದರನ್ನು ಪ್ರೇರೇಪಿಸಿತು.

ದೇವವಾಣಿ ಮುಗಿಯುತ್ತಲೇ ನಾರದರು ಮುಚ್ಚಿದ ಕಣ್ಣು ತೆರೆದು ನೋಡಿದಾಗ ಅವರ ಎದುರು ಏಕಮುಖ, ದ್ವಿಹಸ್ತಗಳಿಂದ ಕಂಗೊಳಿಸುವ ನಯನ ಮನೋಹರವಾದ ಷಣ್ಮುಖನ ಮೂರ್ತಿಯೊಂದು ಗೋಚರಿಸಿತು. ಷಡ್ಮುಖಗಳಿರದೇ ಏಕಮುಖವಾಗಿರುವ ಸುಬ್ರಹ್ಮಣ್ಯನ ವಿಗ್ರಹ ಪ್ರತಿಷ್ಠಾಪನೆ ಗೈಯಲು ನಾರದರ ಸಂಶಯಕ್ಕೆ ಇಂಬು ಕೊಟ್ಟಿತು. ಇದು ಬಾಲ ಸುಬ್ರಹ್ಮಣ್ಯನ ವಿಗ್ರಹ ಎಂದು ನಾರದರಿಗೆ, ಸಂಶಯದಿಂದ ದೂರ ಇರಲು ಅಶರೀರವಾಣಿಯಾಯಿತು. ಆಗ ಬಾಲಸುಬ್ರಹ್ಮಣ್ಯನ ವಿಗ್ರಹವನ್ನು ಮುಗ್ವೆಯಲ್ಲಿ ಸ್ಥಾಪಿಸಲು ನಾರದರು ಅಣಿಯಾದರು.

ಕಾರ್ತಿಕ ಶುಕ್ಲ ಪ್ರತಿಪದೆ ಗೋಕರ್ಣ ಕ್ಷೇತ್ರದಲ್ಲಿ ಶ್ರೀಮಹಾಬಲೇಶ್ವರನು ಪ್ರತಿಷ್ಠೆಯಾದ ಸುದಿನ ವಿಶಾಖಾ ನಕ್ಷತ್ರದ ಗುರುವಾರದ ಶುಭ ಮುಹೂರ್ತ ಎಂದು ನಾರದ ಮುನಿಗಳು ನಿಗದಿ ಪಡಿಸಿ ಅಂದು ಸುಬ್ರಹ್ಮಣ್ಯನ ವಿಗ್ರಹವನ್ನು ಪ್ರತಿಷ್ಠಾಪಿಸಿ ಬಾಲ ಸುಬ್ರಹ್ಮಣ್ಯ ಎಂದು ನಾಮಕರಣ ಮಾಡಿದರು.

**ಶ್ರೀ ಆರ್.ಜಿ. ಶ್ಯಾನಭಾಗ**

ಈ ಸುಮುಹೂರ್ತದಲ್ಲಿ ಸ್ವರ್ಗದಿಂದ ಇಂಪಾದ ಸಾಮಗಾನದ ಸುಧೆ ಪ್ರವಹಿಸಲಾರಂಭಿಸಿತು. ಮುನಿಗಳು ಪ್ರೀತಿಯಿಂದ ಸುಬ್ರಹ್ಮಣ್ಯನನ್ನು ಸಾಮಪ್ರಿಯನೆಂದು ಹೆಸರಿಸಿದರು. ನಾರದರು ಬ್ರಾಹ್ಮಣರ ನೆರವಿನಿಂದ ಒಂಭತ್ತು ದಿನಗಳ ವರೆಗೆ ಪಾಂಚರಾತ್ರ ವಿಧಿಯನ್ನು ಅನುಸರಿಸಿದರು. ಪ್ರತಿಷ್ಠಾ ಮಹೋತ್ಸವ ಅದ್ದೂರಿಯಿಂದ ನೆರವೇರಿತು. ಮುರುಗನಿಗೆ ಗಗನದಿಂದ ದಿವ್ಯ ಪುಷ್ಪದ ಮಳೆಯಾಯಿತು. ಪ್ರಸನ್ನಚಿತ್ತರಾದ ನಾರದರು ಮತ್ತಷ್ಟು ಪ್ರಸನ್ನಚಿತ್ತರಾದರು.

## ವಿಗ್ರಹದಲ್ಲಿ ಒಡಮೂಡಿದ ಸುಬ್ರಹ್ಮಣ್ಯ:

ಪ್ರತಿಷ್ಠಾ ಮಹೋತ್ಸವದ ಅಂತ್ಯದಲ್ಲಿ ನಾರದರು ಸುಬ್ರಹ್ಮಣ್ಯನನ್ನು ಮಾನಸ ಪೂಜೆಯಿಂದ ಆರಾಧಿಸಿದರು. “ಸುಬ್ರಹ್ಮಣ್ಯನೇ ನಿನಗೆ ವಂದನೆಗಳು, ನೀನು ಮಹೇಶ್ವರನು. ದಯಾಸಾಗರನು. ನಿನಗೆ ಭಕ್ತಿಗಿಂತ ಹೆಚ್ಚಿನ ಪ್ರಿಯ ವಸ್ತುವಿಲ್ಲ. ಭಕ್ತಿಗೂ ಸಿಲುಕದ ನಿನಗೆ ನಮಸ್ಕಾರ, ನಿನ್ನ ನಾಮವನ್ನು ಭಕ್ತಿಯಿಂದ ಭಜಿಸುವುದರಿಂದ ಪಾಪ ನಾಶವಾಗುವುದು. ಭಕ್ತರ ಬಯಕೆಯನ್ನು ಸಿದ್ಧಿಸುವ ಕಾಮದೇನು. ಕಾರ್ತಿಕೇಯನಿಗೆ ನಮೋ ನಮಃ. ಎಂದು ನಾರದರು ಗುಣಗಾನ ಗೈಯುತ್ತಿದ್ದಂತೆ ಭಕ್ತ ವತ್ಸಲ ಭಗವಾನ್ ಸುಬ್ರಹ್ಮಣ್ಯನು ಭಕ್ತರಿಗೆ ಸದಾ ದರ್ಶನವನ್ನೀಯಲು ಮೂರ್ತಿಯಲ್ಲಿ ಜೀವಕಳೆಯಾಗಿ ಒಡಮೂಡಿದನು.

ಮೂರ್ತಿಯಲ್ಲಿ ಒಡಮೂಡಿದ ಬಾಲ ಸುಬ್ರಹ್ಮಣ್ಯನು ಅಲ್ಲಿ ನೆರೆದಿರುವ ಭಕ್ತ ಭಜಕರು ಆಲಿಸುವಂತೆ ನಾರದನನ್ನು ಉದ್ದೇಶಿಸಿ ಹೀಗೆ ನುಡಿದನು.

# ಸೂಡಾಕ್ಷೇತ್ರ

ಶಕ್ತಿ ಹಸ್ತಂ ವಿರೂಪಾಕ್ಷಂ
ಶಿಖಿವಾಹಂ ಷಡಾನನಂ
ದಾರುಣಂ ರಿಪು ರೋಗಘ್ನಂ
ಭಾವಯೇತ್ ಕುಕ್ಕುಟಧ್ವಜಮ್॥

ಪ್ರಾಚೀನ ಕಾಲದಿಂದಲೂ 'ನಾಗ' ಅಥವಾ 'ಸರ್ಪ'ವನ್ನು ಶಿವಪುತ್ರ ಸುಬ್ರಹ್ಮಣ್ಯ (ಸ್ಕಂದ) ನೊಂದಿಗೆ ಅಭೇದವಾಗಿ ಕಲ್ಪಿಸಿ ಆರಾಧಿಸುವ ಪದ್ಧತಿ ಕರಾವಳಿಯಲ್ಲಿ ನಡೆದು ಬಂದಿದೆ. ಸರ್ಪನಿಗೆ ಇಲ್ಲಿ ಪ್ರತ್ಯೇಕ ದೇವಾಲಯಗಳೂ, ಬನಗಳೂ, ಗುಡಿಗಳೂ, ಕಟ್ಟೆಗಳೂ ಇದ್ದು ಇಲ್ಲಿಯ ಜನರು ಸರ್ಪನಿಗೆ ನಡೆಸುವ ಕುಣಿತ ರೂಪದ ನೃತ್ಯಾಚರಣೆಗಳಾದ ನಾಗಮಂಡಲ, ಢಕ್ಕೆ, ಬಲಿ ಮುಂತಾದುವು ಇಲ್ಲಿಯ ಕಲೋಪಾಸನೆ ಮತ್ತು ಆರಾಧನಾ ಮನೋಭಾವದ ಹೆಗ್ಗುರುತುಗಳಾಗಿವೆ. ಶ್ರಾವಣ ಶುದ್ಧ ಪಂಚಮಿಯನ್ನು ದೇಶದಾದ್ಯಂತ 'ನಾಗ ಪಂಚಮಿ' ಎಂದು ಆಚರಿಸುವಂತೆ ಇಲ್ಲಿಯೂ ಆಚರಿಸಲಾಗುತ್ತದೆ. ಇವೆಲ್ಲಕ್ಕಿಂತ ಮಿಗಿಲಾಗಿ ಮಾರ್ಗಶಿರ ಮಾಸದ ಶುದ್ಧ ಷಷ್ಠಿಯನ್ನು 'ಸುಬ್ರಹ್ಮಣ್ಯ ಷಷ್ಠಿ' ಎಂದು ಕರೆಯಲಾಗುವ ಪರ್ವದಿನದಂದು ಸುಬ್ರಹ್ಮಣ್ಯನೊಂದಿಗೆ ನಾಗನನ್ನು ಸೇರಿಸಿ ಒಂದೇ ಆಗಿ ಆರಾಧಿಸುವ ಪದ್ಧತಿ ಇಲ್ಲಿನ ವೈಶಿಷ್ಟ್ಯ. ದಕ್ಷಿಣ ಕನ್ನಡದ ಕಾರ್ಕಳ ತಾಲ್ಲೂಕಿನ ಸೂಡಾಕ್ಷೇತ್ರವು ಇಂತಹ ಸುಬ್ರಹ್ಮಣ್ಯಾರಾಧನೆಗೆ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದಿದೆ.

'ಸೂಡಾ' ಎಂಬ ಹೆಸರು ಈ ಕ್ಷೇತ್ರಕ್ಕೆ ಬರಲು ಕಾರಣವೇನೆನ್ನುವುದರ ಬಗ್ಗೆ ಸ್ಥಳೀಯರು ಐತಿಹ್ಯವೊಂದನ್ನು ತಿಳಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಭಾರ್ಗವ ಮುನಿಗಳು ಈ ಊರಿನ ಹತ್ತಿರದ 'ಪಿಲಾರುಖಾನ' ಎಂಬ ಗ್ರಾಮದ ಅರಣ್ಯ ಮಧ್ಯದಲ್ಲಿರುವ ಶಿವಾಲಯದಲ್ಲಿ ತಪಸ್ಸನ್ನೆಯ್ಯುತ್ತಿದ್ದು ಅಲ್ಲಿಂದ ಪ್ರತೀ ದಿನವೂ ಸಂಧ್ಯಾಸಮಯದಲ್ಲಿ ಹತ್ತಿರದ ಈ ಊರಿನ ಹೊಳೆಯಲ್ಲಿ ಸ್ನಾನಕ್ಕಾಗಿ ಬರುತ್ತಿದ್ದರು. ಅವರ ಕೊರಳಲ್ಲೊಂದು 'ಚೂಡಾಮಣಿ' ಮಾಲೆಯಿದ್ದಿತು. ಒಂದು ದಿನ ನದಿಸ್ನಾನ ಮುಗಿಸಿ ರಾತ್ರಿ ಹಿಂತಿರುಗುವಾಗ ಕೊರಳಲ್ಲಿದ್ದ ಚೂಡಾಮಣಿ ಮಾಲೆ ಕಾಣೆಯಾಗಿತ್ತು. ಇದರಿಂದ ಖಿನ್ನರಾದ ಋಷಿಗಳು ಚೂಡಾಮಣಿ ಮಾಲೆಗಾಗಿ ಪರಿತಪಿಸಿ ತಾವು ದಿನ ನಿತ್ಯ ನಡೆದಾಡುವ ನದಿ ಪ್ರದೇಶದಲ್ಲಿ ಮಾಸಗಟ್ಟಲೆ ಅದನ್ನು ಹುಡುಕುತ್ತಿರಲು ಶ್ರೀ ಸುಬ್ರಹ್ಮಣ್ಯನು ಅಶರೀರವಾಣಿಯಲ್ಲಿ "ಋಷಿವರ್ಯಾ, ಚೂಡಾಮಣಿಗಾಗಿ ತಡಕಾಡಬೇಡ, ಆದಿ ಸುಬ್ರಹ್ಮಣ್ಯ ಕ್ಷೇತ್ರದಿಂದ ಸುಬ್ರಹ್ಮಣ್ಯ ಮೂರ್ತಿಯನ್ನು ತಂದು ಈ ಸ್ಥಳದಲ್ಲಿ ಪ್ರತಿಷ್ಠಾಪಿಸಿ, ಪೂಜಿಸಿದರೆ ನಿನ್ನ ಚೂಡಾಮಣಿಮಾಲೆ ದೊರಕುವುದಲ್ಲದೆ, ಇಲ್ಲಿಯ ಜನರಿಗೆ ಸದಾಕಾಲ ಸುಖ, ಸಮೃದ್ಧಿಗಳುಂಟಾಗುತ್ತವೆ" ಎನ್ನಲು ಭಾರ್ಗವ ಮಹರ್ಷಿಗಳು ಕುಕ್ಕೇ ಶ್ರೀ ಸುಬ್ರಹ್ಮಣ್ಯ ದೇವಾಲಯದಿಂದ ಸುಬ್ರಹ್ಮಣ್ಯ ವಿಗ್ರಹವನ್ನು ತಂದು ಪ್ರತಿಷ್ಠಾಪಿಸಿದರೆಂಬ ಪ್ರತೀತಿ ಇದೆ. ಇಂದಿಗೂ ಇಲ್ಲಿಯ ದೇವಾಲಯಕ್ಕೆ ಅಪರಾತ್ರಿಯಲ್ಲಿ ಭಾರ್ಗವ ಋಷಿಗಳು ಬಂದು ಸುಬ್ರಹ್ಮಣ್ಯನನ್ನು ಆರಾಧಿಸುವರೆಂಬ ನಂಬಿಕೆಯಿರುವುದರಿಂದ ಸ್ಥಳೀಯ ಅರ್ಚಕರು ರಾತ್ರಿ ಪೂಜೆಯಾದ ಬಳಿಕ ಹೋಗುವಾಗ ವಿಗ್ರಹದ ಮೇಲಿನ ಎಲ್ಲಾ ಪುಷ್ಪಾಲಂಕಾರಗಳನ್ನು ತೆಗೆದಿಟ್ಟು ಹೋಗುವ ಸಂಪ್ರದಾಯವಿದೆ. ಭಾರ್ಗವ ಋಷಿಯ ಚೂಡಾಮಣಿ ಮಾಲೆಯಿಂದಾಗಿ ಈ ಕ್ಷೇತ್ರ 'ಚೂಡಾಕ್ಷೇತ್ರ'ವೆಂದಾಗಿ, ಜನರ ಬಾಯಿ ಮಾತಿನಲ್ಲಿ ಕ್ರಮೇಣ 'ಸೂಡಾ ಕ್ಷೇತ್ರ' ಎಂದಾಯಿತೆಂದೂ ತಿಳಿದು ಬರುತ್ತದೆ. ದಕ್ಷಿಣ ಕನ್ನಡದ ಪವಿತ್ರ ಸುಬ್ರಹ್ಮಣ್ಯ ಕ್ಷೇತ್ರಗಳಲ್ಲಿ ಈ ಸೂಡಾ ಕ್ಷೇತ್ರವೂ ಪ್ರಸಿದ್ಧವಾಗಿದೆ.

ಪ್ರತೀವರ್ಷ ಮಾರ್ಗಶಿರ ಮಾಸದ ಶುದ್ಧ ಷಷ್ಠಿ ದಿನ (ಸುಬ್ರಹ್ಮಣ್ಯಷಷ್ಠಿ) ದಂದು ಇಲ್ಲಿ ಸಹಸ್ರಾರು ಭಾವುಕ ಹೃದಯಗಳು ಒಂದಾಗಿ ಇಲ್ಲಿನ ರಥೋತ್ಸವದಲ್ಲಿ ಪರಸ್ಪರ ಬೆಸೆಯುತ್ತವೆ. ಷಷ್ಠಿಗೆ ನಾಲ್ಕು ದಿನಗಳಿರುವಾಗಲೇ ಉತ್ಸವದ ಕಳೆ ಎಲ್ಲೆಮೀರಿ ಊರನ್ನಲಂಕರಿಸುತ್ತದೆ. ಗದ್ದೆಗಳ ಸುಶಾಮಲ ಸಸ್ಯಕೋಮಲ ಪ್ರಕೃತಿಯ ನಡುವಿನ ಈ ಕ್ಷೇತ್ರ ಬಣ್ಣಬಣ್ಣದ ಚಿತ್ರ ಚಿತ್ತಾರಗಳಿಂದ ಸರ್ವ ಭೂಷಣಾಲಂಕಾರಗಳಿಂದ ಸ್ವಾಮಿಯ ಅನುಗ್ರಹಕ್ಕಾಗಿ ಸಿದ್ಧವಾಗುತ್ತದೆ. ಷಷ್ಠಿಯ ಹಿಂದಿನ ದಿನ ಷಷ್ಠಿ ದೀಕ್ಷೆಯ ಸಂಕೇತವಾಗಿ ಧ್ವಜಾರೋಹಣವಾಗುತ್ತದೆ. ಊರ ಪರವೂರ ಆರ್ತ ಭಕ್ತರ ತನುಮನಗಳ ಕೊಂಡಿಗಳು ಪರಸ್ಪರ ಹೆಣೆಯಲ್ಪಟ್ಟು ಷಷ್ಠಿ ಮಹೋತ್ಸವ ಸಾಮೂಹಿಕ ಭಕ್ತಿಯ ಪರಾಕಾಷ್ಠೆಯನ್ನು ತಲುಪುತ್ತದೆ.

ಸುಮಾರು ಎರಡೂವರೆ ಅಡಿಯ ಎತ್ತರದ ಶಿಲಾವಿಗ್ರಹದ ಸುಬ್ರಹ್ಮಣ್ಯ ಮೂರ್ತಿ ಮೂರು ಹೆಡೆಯ ನಾಗನನ್ನು ತನ್ನ ಬಲಗೈಯಲ್ಲಿ ಹಿಡಿದುಕೊಂಡಿದೆ. ಇದು ಇಲ್ಲಿನ ಪ್ರಧಾನ ಸುಬ್ರಹ್ಮಣ್ಯ ಮೂರ್ತಿ. ಬಲಿಮೂರ್ತಿ ಬ್ರಹ್ಮಚಾರಿ ಸುಬ್ರಹ್ಮಣ್ಯ ವಿಗ್ರಹ ಬಲುಸುಂದರವಾಗಿದ್ದು ಬಂಗಾರದ ಕವಚ ತೊಟ್ಟು ಉತ್ಸವಕ್ಕೆ ಹೊರಡುತ್ತದೆ. ದೇವಾಲಯದ ಉತ್ತರ ಭಾಗದಲ್ಲಿ 'ಬೊಬ್ಬರ್ಯ ಕಟ್ಟೆ' ಎಂದು ಕರೆಯಲಾಗುವ ಹುತ್ತದ ಗುಡಿಯಿದೆ. ಷಷ್ಠಿಯ ದಿನ ಪ್ರಸಾದ ರೂಪವಾಗಿ ಗಂಧದ ಬದಲಾಗಿ ಕೊಡುವ ಮೃತ್ತಿಕೆ ಪ್ರಸಾದ ಇಲ್ಲಿನದೇ ಆಗಿರುತ್ತದೆ. ಷಷ್ಠಿಯ ಹಿಂದಿನ ದಿನ ಈ ಹುತ್ತಕ್ಕೆ ಹಾಲು, ಸಿಯಾಳ... ... ... ಇತ್ಯಾದಿಗಳನ್ನು ಅರ್ಪಿಸಿ, ಪಂಚಕಜ್ಜಾಯ ನೈವೇದ್ಯ ಮಾಡಿ ತಂತ್ರಿಗಳಿಂದ ಈ ಹುತ್ತದ ಮೃತ್ತಿಕೆಯನ್ನು ತೆಗೆಯಲಾಗುತ್ತದೆ. ಇದೇ ಮರುದಿನಕ್ಕೆ ಗಂಧದೋಪಾದಿಯಲ್ಲಿ ಹಂಚಲಾಗುತ್ತದೆ. ಇಲ್ಲಿಯೇ ಇರಿಸಲಾದ ವಿಗ್ರಹ ಸುಬ್ರಹ್ಮಣ್ಯನದಾಗಿದ್ದು ಬಲಗೈ ಭಗ್ನಗೊಂಡಿದೆ. ದೇವಾಲಯದ ಎದುರು ಈಶಾನ್ಯ ದಿಕ್ಕಿನಲ್ಲಿ ಜುಮಾದಿ ದೈವದ ಗುಡಿಯಿದ್ದು ಜಾತ್ರೆ, ಉತ್ಸವಕ್ಕೆ ಹೊರಟ ದೇವರು ಹಿಂತಿರುಗಿ ಬರುವಾಗ ಜುಮಾದಿ ದೈವವು ಆವೇಶದ ಮೂಲಕ ಸುಬ್ರಹ್ಮಣ್ಯ ದೇವರಿಗೆ

ಶ್ರೀ ಸಿದ್ಧಾಪುರ ವಾಸುದೇವಭಟ್ಟ

ಇಂದಿಗೂ ಸ್ವಾಗತವನ್ನೀಯುತ್ತದೆ. 'ಜುಮಾದಿ ಕೋಲ' ಎಂಬ ಆಂದಿನ ಉತ್ಸವ ಜನಪದ ದೈವಕ್ಕೆ ಸಲ್ಲಿಸುವ ವಿಶೇಷ ಉತ್ಸವವಾಗಿದೆ. ಷಷ್ಠಿಯಾಗಿ ನಾಲ್ಕನೇ ದಿನ ಕವಾಟೋದ್ಘಾಟನದ ದಿನ ಮಾತ್ರ ಇಲ್ಲಿ 'ದರ್ಶನ' (ಆವೇಶ) ನಡೆದು ಸೇರಿದ ಭಜಕ ವೃಂದದ ನೊಂದ ಜೀವನಕ್ಕೆ ಸಂಭಾಷಣೆಯ ಮೂಲಕ ಸಂತೃಪ್ತಿಯ ಅಭಯ ಪ್ರಸಾದ ಕೊಡುತ್ತದೆ.

ಸುಬ್ರಹ್ಮಣ್ಯ ಷಷ್ಠಿಯ ದಿನ ಜಾತಿಮತ ಭೇದವಿಲ್ಲದೆ ಸಹಸ್ರಾರು ಭಜಕರು ಸಹಸ್ರಾರು ವಿಧದ ಸಮಸ್ಯೆಗಳನ್ನು ದೇವರಲ್ಲಿ ಹೇಳಿಕೊಂಡು ಪರಿಹಾರಕ್ಕಾಗಿ ಪ್ರಾರ್ಥಿಸುತ್ತಾರೆ. ಇಲ್ಲಿಯ ಹರಕೆ, ಸೇವೆಗಳು ಸಾಮಾನ್ಯವಾಗಿ ಎಲ್ಲಾ ನಾಗಾಲಯಗಳಲ್ಲಿನ ಸೇವೆಗಳಂತೆ ಸಾಮಾನ್ಯವಾಗಿರುತ್ತವೆ, ಮತ್ತು ಅಂದು ನಾಗಬನಗಳಲ್ಲೂ ವಿಶೇಷ ಸೇವೆಗಳು ಜರುಗುತ್ತವೆ. ಷಷ್ಠಿಯ ದಿನ ಇಲ್ಲಿ ಬ್ರಾಹ್ಮಣ ಸಂತರ್ಪಣೆಯಾದ ನಂತರ ಆ ಉಚ್ಛಿಷ್ಟ ಎಲೆಗಳ ಮೇಲೆ 'ಮಡೆ ಸ್ನಾನ' (ಮಡೆ=ಎಂಜಲು) ಎಂಬ ಉರುಳು ಸೇವೆ ನಡೆಯುತ್ತದೆ. ಜೀವನದ ಕಷ್ಟ-ನಿಷ್ಠುರ, ವಿಘ್ನ-ವಿಡಂಬನೆಗಳಿಗೆ ನೊಂದು ಬೆಂದ ಆರ್ತ ಭಕ್ತರು ದೇವರ ಸನ್ನಿಧಿಯಲ್ಲಿ ಶರಣಾಗಿ ಸುಬ್ರಹ್ಮಣ್ಯಸ್ವಾಮಿಯ ಪ್ರೀತ್ಯರ್ಥವಾಗಿ ನಡೆಸುವ ಉರುಳುವ ಈ ಉರುಳುಸೇವೆ ನೋಟಕರಿಗೆ ಭಾವುಕತೆಯನ್ನುಕ್ಕಿಸುತ್ತವೆ. ದೇವಾಲಯದ ಉತ್ತರ ದಿಕ್ಕಿನಲ್ಲಿರುವ ಕೆರೆಯಲ್ಲಿ ಸ್ನಾನ ಮಾಡಿ, ದೇವರ ಒಳಪೌಳಿಯಿಂದ ಪ್ರದಕ್ಷಿಣಾಕಾರವಲ್ಲಿ ಬಂದು, ನದಿಗೆ ಹೋಗಿ ಪುನಃಸ್ನಾನಗೈದು ದೇವರ ಪ್ರಸಾದ ಸ್ವೀಕರಿಸುವ ಪದ್ಧತಿ ವೈಶಿಷ್ಟ್ಯಪೂರ್ಣವಾದುದು. ಸಂತಾನ ಭಾಗ್ಯಕ್ಕಾಗಿ ದೇವರಿಗೆ ಚಿನ್ನದ ಅಥವಾ ಬೆಳ್ಳಿಯ ತೊಟ್ಟಿಲು ಮತ್ತು ಮಗುವನ್ನೂ ಚರ್ಮರೋಗಕ್ಕೆ ಸಂಬಂಧಿಸಿದ ಕುಷ್ಠ, ಕೆಡು, ತುರಿಕಜ್ಜಿ, ಸಿಬ್ಬು, ಕೈಕಾಲಿನ ಜಡ್ಡು ಸರ್ಪಸುತ್ತು, ಮೊದಲಾದ ನಿತ್ಯ ಜೀವನದ ತೊಂದರೆಗಳಿಗಾಗಿ ಬೆಳ್ಳಿ ಅಥವಾ ಚಿನ್ನದ ಪ್ರತಿರೂಪಗಳನ್ನೂ, ದೃಷ್ಟಿದೋಷ, ಹಲ್ಲಿಯ ಶಕುನ... ಮೊದಲಾದವುಗಳ ನಿವಾರಣೆಗಾಗಿ ದೃಷ್ಟಿ, ಹಲ್ಲಿ, ನಾಗನ ಹೆಡೆಗಳನ್ನು ಚಿನ್ನ ಅಥವಾ ಬೆಳ್ಳಿಯ ಪ್ರತಿರೂಪದಲ್ಲಿ ಅರ್ಪಿಸುವುದಿದೆ. ವಿವಿಧ ಧಾನ್ಯ, ಫಲ, ನಾಣ್ಯಗಳಿಂದ ನಡೆಯುವ ತುಲಾಭಾರ ಹರಕೆಗಳೂ ಗಮನೀಯವಾಗಿವೆ. ಇಂದಿಗೂ ಈ ಕ್ಷೇತ್ರಕ್ಕೆ ದೂರದ ಪ್ರದೇಶಗಳಿಂದ ಮುಸ್ಲಿಮರೂ, ಕ್ರೈಸ್ತರೂ ಭಕ್ತರಾಗಿ ಸೇವೆ ನಡೆಸುತ್ತಾರೆ – ಸರಕಾರದ ಭೂ-ಮಸೂದೆ ಕಾಯಿದೆಯಿಂದಾಗಿ ದೇವಾಲಯದ ನಿತ್ಯ ಸೇವೆಗೆ ಧಕ್ಕೆ ಒದಗಿದರೂ ಆಸ್ತಿಕರ ಮನೋರಥ ವಾಂಛಿತಫಲಸಿದ್ಧಿಯಿಂದ ಬರುವ ಉದಾರ ದೇಣಿಗೆಗಳು ಸೇವಾರ್ಥವನ್ನು ಸಕಾಲಕ್ಕೆ ಅಭಿವೃದ್ಧಿಯತ್ತ ಮುಂದುವರಿಸುತ್ತಿವೆ.

ಯಶಸ್ಕರಂ ಬಲವಂತಂ ಪ್ರಭುತ್ವಂ
ತ್ವಮೇವ ರಾಜಾಧಿಪತಿರ್ಬಭೂವ।
ಸಂಕೀರ್ಣನಾಗಾ ಶ್ವಪತಿರ್ನರಾಣಾಂ
ಸೌಮಂಗಲ್ಯಂ ಸಂತತಂ
ದೀರ್ಘಮಾಯುಃ॥



# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುತ್ತಿದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು ;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ ( ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ )

ಬಸ್ ಹೊರಡುವ ಕಾಲ : ಬೆಳಗ್ಗೆ 8-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
( ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ. )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

(7 ನೇ ಪುಟದಿಂದ)

ಮಾಡುವುದು. ಮಾನವನ ಸಮಸ್ತವಿಧವಾದ ಯೋಚನೆಗಳು, ಕಾರ್ಯಗಳಿಗೆಲ್ಲಾ ಅವನ ಮನಸ್ಸೇ ಕಾರಣವಾದ್ದರಿಂದ ಈ ಮನಸ್ಸು ಬುದ್ಧಿಗಳಲ್ಲಿ ಮನೆ ಮಾಡಿಕೊಂಡಿರುವ ಈ ಗುಣಗಳಿಂದ ನಡೆಯುವ ಕಾರ್ಯಗಳೆಲ್ಲಾ ಸತ್ಕರ್ಮ ದುಷ್ಕರ್ಮ ರೂಪದಲ್ಲಿ ಪ್ರಕಟಿತವಾಗಿ ಜೀವಾತ್ಮನ ಸುಖದುಃಖಗಳಿಗೂ ಸಂಸಾರ ಬಂಧನಕ್ಕೂ ಕಾರಣವಾಗುವುವು ಶುದ್ಧ ಸತ್ತ್ವವು ಪರಿಶುದ್ಧವಾಗಿದ್ದು ಅದು ಜೀವಾತ್ಮನ ಸಂಕೋಚಕ್ಕೆಕಾರಣವಾಗದಿದ್ದರೂ ಅದರೊಡನೆ ಸೇರಿಕೊಂಡಿರುವ ರಜಸ್ತಮೋಗುಣಗಳಿಂದಾಗಿ ಬ್ರಹ್ಮಾಂಡ ಸೃಷ್ಟಿಯಲ್ಲಿರುವ ಸಮಸ್ತ ದೇವ ಮನುಷ್ಯಾದಿಗಳಲ್ಲಿ ಜ್ಞಾನ ಸಂಕೋಚವಿದ್ದೇ ಇರುವುದು.

ಭಗವದ್ಗೀತೆಯ ಹದಿನಾಲ್ಕನೆ ಅಧ್ಯಾಯದಲ್ಲಿ ಈ ಸತ್ತ್ವರಜಸ್ತಮೋಗುಣಗಳ ಸ್ವರೂಪವುತ್ತು ಸ್ವಭಾವಗಳು ಈ ರೀತಿಯಾಗಿ ಹೇಳಿರುವುದು. ಭಗವದ್ಗೀತೆಯನ್ನು ಬಿಟ್ಟರೆ ಬೇರೆ ಯಾವ ಶಾಸ್ತ್ರ ಗ್ರಂಥದಲ್ಲೂ ಅಷ್ಟು ವಿಶದತಮ ವಿವರಣವು ದೊರಕುವುದಿಲ್ಲ.

## ಸತ್ತ್ವಗುಣ

ಸತ್ತ್ವಗುಣವು ಪರಿಶುದ್ಧವಾದದ್ದು. ಸತ್ಯವಾದ ಜ್ಞಾನವನ್ನು ಮರೆಸುವ ಸ್ವಭಾವವಿಲ್ಲದ್ದು. ಅದ್ದರಿಂದ ಚಿದಚಿದೀಶ್ವರರುಗಳ ಯಥಾರ್ಥಜ್ಞಾನವನ್ನು ತೋರಿಸಿಕೊಡುವುದು. ಆರೋಗ್ಯಕ್ಕೆ ಕಾರಣವಾದದ್ದು. ಇದು ಸುಖರೂಪವಾದ ಸಂಬಂಧವನ್ನುಂಟುಮಾಡುವುದರಿಂದಲೂ ಮತ್ತು ಜ್ಞಾನ ಸಂಬಂಧವನ್ನುಂಟು ಮಾಡುವುದರಿಂದಲೂ, ಕ್ಷೇತ್ರಜ್ಞನನ್ನು ಬಂಧಿಸುತ್ತದೆ. ಸುಖ ಮತ್ತು ತತ್ತ್ವ ಜ್ಞಾನಾಭಿವೃದ್ಧಿಯನ್ನುಂಟು ಮಾಡುವ ಅನುಕೂಲ ಜನ್ಮಗಳಲ್ಲಿ ಹುಟ್ಟುತ್ತಾನೆ ಮತ್ತು ಜ್ಞಾನಿಯಾಗುತ್ತಾನೆ. ಅಂತಹ ಸುಖ ಮತ್ತು ಜ್ಞಾನ ಸಾಧನ ರೂಪವಾದ ಜನ್ಮಗಳಲ್ಲಿ ಅವನನ್ನು ಬಂಧಿಸುತ್ತದೆ 'ಬಂಧಿಸುತ್ತದೆ' ಎನ್ನುವುದರಿಂದ – ಈ ಸತ್ತ್ವಗುಣಾಭಿವೃದ್ಧಿಯೊಡನೆ ಕರ್ಮ ಜ್ಞಾನ ಭಕ್ತಿಯೋಗಗಳನ್ನು ಅನುಷ್ಠಿಸದಿದ್ದರೆ ಸಂಸಾರ ಬಂಧನವು ತಪ್ಪುವುದಿಲ್ಲ ಎಂದು ಅರ್ಥ (ಈ ಉಪಾಯಾನುಷ್ಠಾನಗಳಿಗೆ ಸತ್ತ್ವಗುಣಾಭಿವೃದ್ಧಿಯು ಅತ್ಯಾವಶ್ಯಕ ಇದರಿಂದ ಅಮಾನಿತ್ವಾದಿ ಆತ್ಮಗುಣಗಳು ಅಭಿವೃದ್ಧಿಯಾಗುವುವು) ಈ ಸತ್ತ್ವಗುಣವು ಸುಖ ಸಂಬಂಧವೇ ಪ್ರಧಾನವಾಗಿ ಉಳ್ಳದ್ದು. ಈ ಮೂರು ಗುಣಗಳೂ ಶರೀರದಲ್ಲಿ ಯಾವಾಗಲೂ ಇರುವುದಾದರೂ ಸತ್ತ್ವಗುಣ ಪ್ರಚುರವಾದ ಕಾರ್ಯಗಳು ಜರುಗುವಾಗ ಮನಸ್ಸಿನಲ್ಲಿ ಸತ್ತ್ವಗುಣವು ಪ್ರಚೋದಿಸಲ್ಪಟ್ಟು (ಎಂದರೆ ಭಗವತ್ಸಂಕಲ್ಪದಿಂದ ಶಕ್ತಿಯನ್ನು ಪಡೆದು) ರಜಸ್ತಮೋಗುಣಗಳನ್ನು ಪಕ್ಕಕ್ಕೆ ಸರಿಸಿ ತನ್ನ ಕಾರ್ಯವನ್ನು ಸಾಧಿಸುವುದು. ಈ ವಿಧವಾದ ಪ್ರಚೋದನೆಯನ್ನು ಶರೀರವು ಮಾಡುವ ಕಾರ್ಯಗಳಿಂದಲೇ ಗುರ್ತಿಸಬೇಕಲ್ಲದೆ ಬೇರೆ ಮಾರ್ಗದಿಂದ ತಿಳಿಯುವುದಿಲ್ಲ.

ಜ್ಞಾನ ಪ್ರಸರಣಕ್ಕೆ ಕಾರಣವಾದ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಇವುಗಳ ಮೂಲಕ ವಸ್ತುಯಾಥಾತ್ಮ್ಯ ಸ್ವರೂಪವು ಚೆನ್ನಾಗಿ ಪ್ರಕಾಶಿಸುವಾಗ ದೇಹದಲ್ಲಿ ಸತ್ತ್ವಗುಣಾಭಿವೃದ್ಧಿಯಾಗಿರುವುದೆಂದು ತಿಳಿಯತಕ್ಕದ್ದು. ಸತ್ಕಾರ್ಯಪ್ರವರ್ತನೆಯಲ್ಲೇ ಇದ್ದು ಸತ್ತ್ವಗುಣವು ಪ್ರಾಚುರ್ಯದಲ್ಲಿರುವಾಗ ಮರಣಿಸುವವನು ತನ್ನ ಮುಂದಿನ ಜನ್ಮದಲ್ಲಿ ಪರಿಶುದ್ಧವಾದ ಆತ್ಮಗುಣವುಳ್ಳವರ ಕುಲದಲ್ಲಿ ಜನ್ಮವನ್ನು ಪಡೆದು ಆತ್ಮಯಾಥಾತ್ಮ್ಯ ಜ್ಞಾನಾಭಿವೃದ್ಧಿಗೆ ಕಾರಣವಾದ ಪುಣ್ಯಕರ್ಮಗಳಿಗೆ ಅಧಿಕಾರವನ್ನು ಪಡೆದು ಒಳ್ಳೆಯ ಜ್ಞಾನಾನುಷ್ಠಾನವುಳ್ಳವನಾಗಿರುವನು. ಅಂಥವನು ಫಲಸಂಗವನ್ನು ತ್ಯಜಿಸಿ ಭಗವದಾರಾಧನ ರೂಪವಾದ ಕರ್ಮಗಳ ಫಲವಾಗಿ ಸತ್ತ್ವಗುಣವು ಉತ್ತರೋತ್ತರ ಅಭಿವೃದ್ಧಿಯನ್ನು ಪಡೆದು ದುಃಖ ಗಂಧರಹಿತನಾಗಿ ಶಾಂತಿಯನ್ನೂ ಆನಂದವನ್ನೂ ಹೊಂದುವನು. ಪರಂಪರೆಯಾದ ಸತ್ತ್ವಗುಣಾಭಿವೃದ್ಧಿಯಿಂದ ಆತ್ಮತತ್ತ್ವವನ್ನು ವಿಷಯೀಕರಿಸುವ ಪ್ರತ್ಯಕ್ಷ ಜ್ಞಾನವುಂಟಾಗಿ, ಹಾಗೆಯೇ ಅಭಿವೃದ್ಧಿ ಹೊಂದಿ ಶರೀರಾವಸಾನದಲ್ಲಿ ಕೈವಲ್ಯಪ್ರಾಪ್ತಿಯನ್ನು ಪಡೆಯುವನು.

## ರಜೋಗುಣ

ರಜೋಗುಣವು ಕಾಮಸುಖಗಳಲ್ಲಿ ಆಸೆಯನ್ನುಂಟು ಮಾಡುವುದು ಹೆಚ್ಚು ಹೆಚ್ಚಾಗಿ ಕಾಮ (ಎಂದರೆ ಪ್ರಾಕೃತ ವಿಷಯ) ಸುಖಗಳನ್ನು ಅನುಭವಿಸಬೇಕೆಂಬ ದಾಹವನ್ನು ಇಂದ್ರಿಯ ಮತ್ತು ಮನಸ್ಸುಗಳಲ್ಲಿ ಉಂಟು ಮಾಡುವುದು. ಈ ಕಾರಣಗಳಿಂದ ಜೀವಾತ್ಮನನ್ನು ಪ್ರವೃತ್ತಿ ಮಾರ್ಗದಲ್ಲಿ ಕಟ್ಟಿ ಹಾಕಿ ಬಿಡುವುದು. ಕಾಮೋಪಭೋಗಗಳಲ್ಲಿ ದಾಹವು ಹೆಚ್ಚುತ್ತಾ ಹೋಗಿ ಮುಂದಿನ ಜನ್ಮಗಳಲ್ಲೂ ಅವುಗಳ ವಾಸನಾರುಚಿಗಳು ಅನುಸರಿಸಿಕೊಂಡು ಬರುವುವು, ಇದನ್ನೆಲ್ಲಾ ಆಯಾ ಜನ್ಮಗಳಲ್ಲಿ ಅವರಲ್ಲಿರುವ ಇಷ್ಟಾನಿಷ್ಟಗಳಿಂದ ಗುರ್ತಿಸಬಹುದು ಕೋಪವು ರಜೋಗುಣದ ಮುಖ್ಯ ಪ್ರಚೋದನೆ. ಹೇಗೆಂದರೆ ಇವನ ವಿಷಯಾಭಿಲಾಷೆಯ ಪ್ರಯತ್ನದಲ್ಲಿ ಅಡ್ಡಿ ಆತಂಕಗಳೇರ್ಪಟ್ಟರೆ ಅವಕ್ಕೆ ಕಾರಣವಾದವರ ಮೇಲೆ ಕೋಪ ಏರ್ಪಡುವುದು. ಕೋಪವು ಪಾಪ ಕಾರ್ಯಗಳಿಗೆ ಪ್ರಚೋದನೆಯನ್ನುಂಟು ಮಾಡುವುದು. ಆ ಸಂದರ್ಭವನ್ನೆ ಕಾದಿದ್ದು ತಮೋಗುಣವು ಇವನಲ್ಲಿ ಉದ್ರೇಕಪಡೆದು ಪಾಪ ಕಾರ್ಯವನ್ನು ಮಾಡಿಸಿ ಬಿಡುವುದು. ರಜೋಗುಣವು ವಿಷಯೋಪಭೋಗವನ್ನೇ ಪ್ರಧಾನವಾಗಿ ಉಳ್ಳದ್ದು. ರಜೋಗುಣ ರೂಪವಾದ ಕಾರ್ಯವು ಜರುಗುವಾಗುವಾಗ ಅದು ಶಕ್ತಿ ಪಡೆದು ಮನಸ್ಸಿನಲ್ಲಿರುವ ಸತ್ತ್ವ ಗುಣವನ್ನು ಪಕ್ಕಕ್ಕೆತಳ್ಳಿ ತನ್ನ ಕಾರ್ಯವನ್ನು ಸಾಧಿಸಿಬಿಡುವುದು, ಈ ವಿಧವಾದ ಕಾರ್ಯಗಳಿಂದಲೇ ರಜೋಗುಣವು ಪ್ರಚೋದನೆಯಲ್ಲಿರುವುದೆಂದು ಅರಿಯಬೇಕು.

ತನ್ನದಾದ ಯಾವ ವಸ್ತುಗಳನ್ನೂ ಇತರರಿಗೆ ಕೊಡಲಾರದ ಜಿಪುಣತನವೂ, ಪ್ರಯೋಜನವಿಲ್ಲ

ದಿದ್ದರೂ ಸುಮ್ಮನಿರಲಾರದೆ ಯಾವುದಾದರೂ ಕಾರ್ಯವನ್ನು ಮಾಡುತ್ತಿರಬೇಕೆಂಬ ಪ್ರವೃತ್ತಿಯೂ, ಫಲಸಾಧನ ರೂಪವಾದ ಕಾರ್ಯದಲ್ಲಿ ಆರಂಭವೂ, ಇಂದ್ರಿಯಚಾಪಲ್ಯಗಳನ್ನಡಗಿಸಲಾಗದಿರುವುದೂ, ಇವೆಲ್ಲಾ ರಜೋಗುಣವು ತಲೆಯೆತ್ತಿದಾಗ ಉಂಟಾಗುವುವು. ರಜೋಗುಣವು ಅಭಿವೃದ್ಧಿಯಾಗಿರುವಾಗ ಶರೀರ ತ್ಯಾಗಮಾಡುವವನು ಐಹಿಕ ಮತ್ತು ಸ್ವರ್ಗಾದಿ ಫಲಗಳಿಗಾಗಿ ಕರ್ಮ ಮಾಡುವವರ ಕುಲದಲ್ಲಿ ಜನ್ಮವೆತ್ತುವನು, ಮತ್ತು ಐಹಿಕ ಮತ್ತು ಸ್ವರ್ಗಾದಿ ಫಲಗಳಿಗಾಗಿ ಕರ್ಮ ಮಾಡುವ ಅಧಿಕಾರವುಳ್ಳವನಾಗುವನು. ಅಂಥವನು ಪುನಃ ಪುನಃ ಅನೇಕ ವಿಧವಾದ ಕಾಮ್ಯಕರ್ಮಗಳಲ್ಲೇ ಆಸಕ್ತನಾಗಿ ಸಂಸಾರದಲ್ಲೇ ಸುತ್ತುತ್ತಿರುವನು. ಅವನಿಗೆ ಪರಂಪರೆಯಾಗಿ ರಜೋಗುಣವೇ ಅಭಿವೃದ್ಧಿಯಾಗಿ ಐಹಿಕ ಮತ್ತು ಸ್ವರ್ಗ ಫಲಗಳಲ್ಲೇ ಆಸಕ್ತಿ ಹೆಚ್ಚುವುದು.

## ತಮೋಗುಣ

ತಮೋಗುಣವು ಮಾನವನಲ್ಲಿ ಅಜ್ಞಾನ, ಅನ್ಯಥಾಜ್ಞಾನ, ವಿಪರೀತಜ್ಞಾನಗಳಿಗೆ ಕಾರಣವಾದದ್ದು. ಅಜ್ಞಾನವೆಂದರೆ ವಿಷಯಜ್ಞಾನವೇ ಇಲ್ಲದಿರುವುದು. ಅನ್ಯಥಾಜ್ಞಾನವೆಂದರೆ ಸತ್ಯವಾದ ಜ್ಞಾನಕ್ಕೆ ಬೇರೆ ವಿಧವಾಗಿ ತಿಳಿಯುವುದು. ವಿಪರೀತ ಜ್ಞಾನವೆಂದರೆ ಸತ್ಯವಾದ ಜ್ಞಾನಕ್ಕೆ ನೇರವಾಗಿ ವ್ಯತಿರಿಕ್ತವಾದ ಜ್ಞಾನ ಮತ್ತು ಭ್ರಮೆಯನ್ನುಂಟು ಮಾಡುವುದು. ತಮಸ್ಸು ಕ್ಷೇತ್ರಜ್ಞನನ್ನು ಪ್ರಮಾದ ಆಲಸ್ಯ ನಿದ್ರೆ ಇವುಗಳಿಂದ ಸಂಸಾರದಲ್ಲಿ ಚೆನ್ನಾಗಿ ಬಂಧಿಸಿ ಬಿಡುವುದು. ಇಲ್ಲಿ ಪ್ರಮಾದವೆಂದರೆ ಅಜಾಗರೂಕತೆ, ಎಂದರೆ ಮಾಡಬೇಕಾದ ಕೆಲಸವನ್ನು ಬಿಟ್ಟು ಬೇರೆ ಕಾರ್ಯದಲ್ಲಿ ಪ್ರವರ್ತಿಸುವುದು 'ಆಲಸ್ಯ' ವೆಂದರೆ ಮಾಡಬೇಕಾದ ಕಾರ್ಯವನ್ನು ಆರಂಭಿಸದೆ ಇರುವುದು, ಅಥವಾ, ಆಗಲೇ ಮಾಡಬೇಕಾದ ಕಾರ್ಯವನ್ನು ನಿಧಾನವಾಗಿ ಮಾಡೋಣವೆಂದು ಸುಮ್ಮನಿರುವುದು 'ನಿದ್ರೆ' ಯೆಂದರೆ ಇಂದ್ರಿಯಗಳ ಪ್ರವರ್ತನೆಯಿಲ್ಲದೆ ವಿಶ್ರಾಂತಿ ಹೊಂದುತ್ತಿರುವುದು. ಇಂತಹ ಪ್ರಮಾದ, ಆಲಸ್ಯ, ನಿದ್ರೆ ಸೋಮಾರಿತನ ಇವುಗಳಿಂದ ಕ್ಷೇತ್ರಜ್ಞನನ್ನು ಬಂಧಿಸುತ್ತದೆ. ತಮೋಗುಣವು ಸತ್ಯಜ್ಞಾನವನ್ನು ಮರೆಸಿ ಭ್ರಮೆ, ಮೋಹಾದಿಗಳನ್ನುಂಟು ಮಾಡಿ ಸರಿಯಾದ ಕಾರ್ಯಕ್ಕೆ ವ್ಯತಿರಿಕ್ತವಾದ ಕಾರ್ಯವನ್ನು ಮಾಡಿಸಿಬಿಡುವುದು. ಆಯಾ ಸಂದರ್ಭಗಳಲ್ಲಿ ತಮೋಗುಣವು ಬಲಿಷ್ಠವಾಗಿ ಪ್ರಚೋದಿಸಲ್ಪಟ್ಟು ಸತ್ತ್ವ ರಜೋಗುಣಗಳನ್ನು ಸಾವರಿಸಿ ತನ್ನ ಕಾರ್ಯವನ್ನು ಮಾಡಿಬಿಡುವುದು. ಜ್ಞಾನಶೂನ್ಯತೆಯೂ ಎಂದರೆ ಯಥಾರ್ಥ ಜ್ಞಾನವುಂಟಾಗದಿರುವುದೂ, ಯಾವಕಾರ್ಯವನ್ನು ಮಾಡಬೇಕೆಂದು ತಿಳಿಯದೆ ಸುಮ್ಮನಿರುವುದೂ, ಮಾಡಬಾರದ ಕಾರ್ಯದಲ್ಲಿ ಪ್ರವೇಶಿಸುವುದೂ, ಮತ್ತು ಅನ್ಯಥಾಜ್ಞಾನಗಳಿಂದ ತಮೋಗುಣವು ಅಭಿವೃದ್ಧಿಯಾಗಿರುವುದೆಂದು ತಿಳಿಯಬೇಕು ತಮೋಗುಣವು ಪ್ರವೃತ್ತವಾಗಿರುವಾಗ ದೇಹತ್ಯಾಗಮಾಡುವವನು ನಾಯಿ ಹಂದಿ ಇತ್ಯಾದಿ ಹೀನ ಜಾತಿಗಳಲ್ಲಿ ಜನ್ಮವೆತ್ತುವನು. ಅಂಥವನು ಧರ್ಮಾರ್ಥಕಾಮಮೋಕ್ಷಾದಿಯಾವ ಪುರುಷಾರ್ಥ ಸಾಧನೆಗೂ ಯೋಗವಾದ ಕರ್ಮಗಳಿಗೂ ಅನರ್ಹನಾಗುವನು ಅಂಥವನಿಗೆ ಪರಂಪರೆಯಾಗಿ ಅಜ್ಞಾನವೇ ಕವಿದುಕೊಂಡಿರುವುದು. ಕೊನೆಗೆ ಜ್ಞಾನಶೂನ್ಯತೆಯೇ ಪಡುವುದು.

ಹೀಗೆ ಭಗವದ್ಗೀತೆಯ ಹದಿನಾಲ್ಕನೆ ಅಧ್ಯಾಯದಲ್ಲಿ ಸತ್ತ್ವರಜಸ್ತಮೋಗುಣಗಳ ಸ್ವರೂಪ ಮತ್ತು ಸ್ವಭಾವಗಳನ್ನು ವಿವರಿಸಿ ಅವು ಕ್ಷೇತ್ರಜ್ಞನನ್ನು ಹೇಗೆ ಸಂಸಾರದಲ್ಲಿ ಬಂಧಿಸುತ್ತವೆ ಎಂಬುದನ್ನು ವಿಸ್ತಾರವಾಗಿ ಉಪದೇಶಿಸಿರುವುದು. ರಜಸ್ತಮೋಗುಣಗಳ ಪ್ರಾಬಲ್ಯವು ಪ್ರವೃತ್ತಿಮಾರ್ಗವನ್ನೇ ಪ್ರಚೋದಿಸುವುದು ಎಂಬುದನ್ನು ವಿಶದಪಡಿಸಿರುವುದು. ಉಪನಿಷತ್ಸಾರವಾಗಿ ನಿವೃತ್ತಿಮಾರ್ಗ ಪ್ರತಿಪಾದಕವಾದ ಭಗವದ್ಗೀತೆಯಲ್ಲಿ ಪ್ರವೃತ್ತಿ ಮಾರ್ಗದಿಂದ ದುಃಖವೂ ಮತ್ತು ಸ್ವರ್ಗಾದಿ ಅಶಾಶ್ವತ ಫಲಗಳೂ ದೊರೆತು ಅವು ಮುಕ್ತಿಗೆ ಕಾರಣವಾಗುವುದಿಲ್ಲವಾದ್ದರಿಂದ ಪ್ರವೃತ್ತಿ ಮಾರ್ಗ ಪ್ರವರ್ತಕರನ್ನು ಅಜ್ಞಾನಿಗಳು ಮೂಢರು ಎಂದು ನಿಂದಿಸಿ ಶಾಶ್ವತ ಮೋಕ್ಷ ಫಲಪ್ರದವಾದ ನಿವೃತ್ತಿ ಮಾರ್ಗವನ್ನು ಅನುಸರಿಸುವಂತೆ ಪ್ರಚೋದಿಸಿ ನಿವೃತ್ತಿ ಮಾರ್ಗಾಚರಣೆಗೆ ಅವಶ್ಯಕವಾದ ಸಾಧನೆಗಳನ್ನು ವಿವರಿಸಿರುವುದು. ಈ ವಿಧವಾದ ಸಾಧನೆಗಳಿಗೆ ಆವಶ್ಯಕವಾದ ಯಜ್ಞಗಳು (ಎಂದರೆ ಕರ್ಮಯೋಗಾಭ್ಯಾಸ) ದಾನ, ತಪಸ್ಸು, ತ್ಯಾಗ, ಧೃತಿ, ಶ್ರದ್ಧೆ ಇತ್ಯಾದಿಗಳಲ್ಲೂ ಈ ಸತ್ತ್ವ ರಜಸ್ತಮೋಗುಣಗಳು ಮಿಶ್ರವಾಗಿರುವುದನ್ನು ವಿವರಿಸಿ ಅವುಗಳಲ್ಲಿ ಸಾತ್ತ್ವಿಕರೂಪವಾದವುಗಳನ್ನೇ ಅಂಗೀಕರಿಸಿ ಆಚರಿಸುವಂತೆ ವಿಶದವಾಗಿ ಬೋಧಿಸಿರುವುದು. ಅವುಗಳ ಸೂಕ್ಷ್ಮ ವಿವರಣಗಳು ಮಾತ್ರ ಇಲ್ಲಿ ಸೂಚಿಸಿರುವುದು ಅವುಗಳ ವಿಸ್ತಾರವನ್ನು ಭಗವದ್ಗೀತಾ ಗ್ರಂಥದಲ್ಲೇ ನೋಡಿ ತಿಳಿದು ಕೊಳ್ಳಬಹುದು.

## ಹದಿನೇಳನೆ ಅಧ್ಯಾಯವಿಚಾರ

### ಶ್ರದ್ಧೆ

ಪ್ರವೃತ್ತಿ ಮಾರ್ಗವನ್ನು ತ್ಯಜಿಸಿ ನಿವೃತ್ತಿ ಮಾರ್ಗವನ್ನು ಪ್ರವೇಶಿಸ ಬೇಕಾದರೆ ಮೊಟ್ಟಮೊದಲು ಅದರಲ್ಲಿ ತೀವ್ರವಾದ ಶ್ರದ್ಧೆಯಿರಬೇಕು. ಗುರಿಯನ್ನು ತಲುಪುವವರೆಗೂ ಈ ಶ್ರದ್ಧೆಯನ್ನು ಬಿಡಕೂಡದು. ಈ ಶ್ರದ್ಧೆಯು ಕೂಡ ಸತ್ತ್ವರಜಸ್ತಮೋಗುಣ ರೂಪದಲ್ಲಿ ಸಹಜವಾಗಿ ಮೂರು ವಿಧವಾಗಿರುವುದು. ಸಮಸ್ತ ಪ್ರಾಣಿಗಳಿಗೂ ಹುಟ್ಟುವಾಗಲೇ ಮನಸ್ಸಿನ ಸಾತ್ತ್ವಿಕ, ರಾಜಸ ತಾಮಸ ಗುಣಗಳಿಗನುವಾಗಿ ಕ್ಷೇತ್ರಜ್ಞನ ಅಂತಃಕರಣದಲ್ಲಿ ಈ ಮೂರು ವಿಧವಾದ ಶ್ರದ್ಧೆಯು ಸಹಜವಾಗಿಯೇ ಇರುತ್ತದೆ. ಈ ಶ್ರದ್ಧೆಯೇ ಚೇತನನ ಪ್ರಯತ್ನಗಳಿಗೆಲ್ಲಾ ಮೂಲವು ಅವುಗಳಲ್ಲಿ ಸಾತ್ತ್ವಿಕ ಶ್ರದ್ಧೆಯನ್ನೇ ಆರಿಸಿ ಉಳಿದವುಗಳನ್ನು ತ್ಯಜಿಸ ಬೇಕು.

### ಆಹಾರ

ನಾವು ಭುಜಿಸುವ ಆಹಾರದಲ್ಲಿ ಸಾತ್ತ್ವಿಕ ರಾಜಸ ತಾಮಸಗಳೆಂದು ಮೂರು ವಿಧವಿರುವುದು. ನಾವು ಭಜಿಸುವ ಆಹಾರದಿಂದಲೇ ನಮ್ಮ ಮನಸ್ಸು ಮತ್ತು ಇಂದ್ರಿಯಗಳು ಬೆಳೆಯುವುದರಿಂದ ನಿವೃತ್ತಿ ಮಾರ್ಗಕ್ಕೆ ಸಾತ್ತ್ವಿಕಾಹಾರ ಸೇವನೆ ಅತ್ಯವಶ್ಯಕ.

### ಯಜ್ಞ ದಾನ, ತಪಸ್ಸುಗಳು

ನಾವು ಆಚರಿಸುವ ಯಜ್ಞ, ದಾನ, ತಪಸ್ಸುಗಳು ಸಾತ್ತ್ವಿಕ ರಾಜಸ ತಾಮಸ ರೂಪಗಳಿಂದ ಮೂರು ವಿಧವಾಗಿರುವುದನ್ನು ವಿವರಿಸಿ ಅವುಗಳಲ್ಲಿ ರಾಜಸ ತಾಮಸ ರೂಪಗಳನ್ನು ತ್ಯಜಿಸಿ ಸಾತ್ತ್ವಿಕ ರೂಪವಾದವುಗಳನ್ನೇ ಆಚರಿಸಬೇಕು ಎಂದು ಹೇಳಿರುವುದು.

## ಹದಿನೆಂಟನೆ ಅಧ್ಯಾಯವಿಷಯ

ಈ ಅಧ್ಯಾಯದಲ್ಲಿ ಸನ್ಯಾಸ ಮತ್ತು ತ್ಯಾಗಗಳ ವಿಷಯಗಳು ವಿಮರ್ಶಿಸಲ್ಪಟ್ಟು, ಶ್ರೀ ಕೃಷ್ಣನು-ಸನ್ಯಾಸವೆಂದು ಅನೇಕರು ತಿಳಿದು ಕೊಂಡಿರುವ ಕರ್ಮದ ಸ್ವರೂಪ ತ್ಯಾಗವನ್ನು ನಿಂದಿಸಿ ಅದು ತಾಮಸ ರೂಪವೆಂದೂ ಅಜ್ಞಾನ ಜನಕವೆಂದು ಹೇಳಿ 'ಫಲಸಂಗ ತ್ಯಾಗರೂಪವಾದ ಕರ್ಮಯೋಗವೇ ಸನ್ಯಾಸವೆಂಬುದರ ನಿಜವಾದ ಅರ್ಥ ಎಂದು ಹೇಳಿ, ಅದೇ ತ್ಯಾಗವೆಂಬುದರ ನಿಜವಾದ ಅರ್ಥವೆಂದೂ, ಈ ಎರಡು ಪದಗಳೂ ಏಕಾರ್ಥ ಪ್ರತಿಪಾದಕವೆಂದೂ ಹೇಳಿರುವನು.

ಕೈವಲ್ಯ ಮುಕ್ತಿಗೂ ಭಕ್ತಿಯೋಗಾಭ್ಯಾಸಕ್ಕ ಅವಶ್ಯಕವಾದ ಈ ತ್ಯಾಗವು ಕರ್ಮ ಫಲತ್ಯಾಗ ಮಮತಾತ್ಯಾಗ ಮತ್ತು ಕರ್ತೃತ್ವ ತ್ಯಾಗವೆಂದು ಮೂರು ವಿಧವಾಗಿರುವುದು ಮುಮುಕ್ಷುವಾದವನು ಕರ್ತವ್ಯ ಕರ್ಮಗಳು ಅವಶ್ಯವಾಗಿ ಆಚರಿ

ಬೇಕಾದವುಗಳು. ಯಾತಕ್ಕೆಂದರೆ – ಅವುಗಳಿಂದ ಪಾಪನಿವೃತ್ತಿ ಮತ್ತು ಜ್ಞಾನಾಭಿವೃದ್ಧಿಗಳೇರ್ಪಡುವುವು ಮತ್ತು ಭಕ್ತಿ ಯೋಗಾಭ್ಯಾಸಕ್ಕೆ ಇವೆರಡೂ ಅವಶ್ಯಕ.

ಮೇಲೆ ಹೇಳಿದ ಕರ್ತವ್ಯ ಕರ್ಮಗಳು ಶಾಸ್ತ್ರಗಳಲ್ಲಿ ಮೂರು ಭಾಗವಾಗಿ ವಿಭಾಗಿಸಲ್ಪಟ್ಟಿರುವುವು. ಕರ್ತವ್ಯ ಕರ್ಮದ ಜ್ಞಾನ ಕರ್ತವ್ಯರೂಪವಾದ ಕರ್ಮ ಮತ್ತು ಆ ಕರ್ಮಗಳನ್ನು ಆಚರಿಸುವ ಕರ್ತಾ, ಈ ಜ್ಞಾನ, ಕರ್ಮ, ಕರ್ತಾ ಇವು ಒಂದೊಂದೂ ಸತ್ತ್ವ ರಜಸ್ತಮೋಗುಣ ರೂಪವಾಗಿ ಮೂರು ವಿಧವಾಗಿರುವನೆಂದು ಹೇಳಿ ಒಂಭತ್ತು ಶ್ಲೋಕಗಳಿಂದ ಅವುಗಳನ್ನು ವಿವರಿಸಿರುವುದು.

ಮುಂದೆ ಸರ್ವತತ್ತ್ವ ಸರ್ವಪುರುಷಾರ್ಥ ನಿಶ್ಚಯರೂಪವಾದ ಬುದ್ಧಿಯೂ ವಿಘ್ನಗಳಲ್ಲೂ ಬಿಡದೆ ಸಾಧಿಸುವ ಕಾರ್ಯನಿರ್ವಾಹಕ ಶಕ್ತಿಯಾದ ಧೃತಿಯೂ, ಸಾತ್ತ್ವಿಕ ರಾಜಸ, ತಾಮಸ ರೂಪವಾಗಿ ಒಂದೊಂದೂ ಮೂರು ವಿಧವಾಗಿರುವುದೆಂದು ಹೇಳಿ ಏಳು ಶ್ಲೋಕಗಳಿಂದ ಅವುಗಳನ್ನು ವಿವರಿಸಿರುವುದು. ಮೇಲೆ ಹೇಳಿದ ಬುದ್ಧಿಗೂ ಹಿಂದೆ ಹೇಳಿದ ಜ್ಞಾನಕ್ಕೂ ಇರುವ ವ್ಯತ್ಯಾಸವೇನೆಂದರೆ 'ಜ್ಞಾನವು' ಶಾಸ್ತ್ರರೀತ್ಯಾ ಆಚರಿಸಬೇಕಾದ ಕರ್ಮದ ಜ್ಞಾನ. 'ಬುದ್ಧಿಯು' ಏನೆಂಬುವುದನ್ನು ಮೇಲೆ ಹೇಳಿದೆ

ಇಲ್ಲಿಯವರೆಗೂ ಹೇಳಲ್ಪಟ್ಟ ಜ್ಞಾನ, ಕರ್ಮ, ಧೃತಿ ಬುದ್ಧಿ ಇತ್ಯಾದಿಗಳೆಲ್ಲಾ ಯಾವ ಸುಖಕ್ಕೆ ಸಾಧನಭೂತಗಳಾಗುವುವೋ ಆ ಸುಖವೂ ಸತ್ತ್ವ ರಜಸ್ತಮೋಮೂಲವಾಗಿ ಮೂರು ವಿಧವಾಗಿರುವುದು. ಅವುಗಳನ್ನು ಮುಂದಿನ ಮೂರು ಶ್ಲೋಕಗಳಿಂದ ವಿವರಿಸಿರುವುದು.

ಹೀಗೆ ಈ ಸತ್ತ್ವ ರಜಸ್ತಮೋಗುಣಗಳು ನಾವು ಊಹಿಸಲಾರದಷ್ಟು ವಿಧದಲ್ಲಿ ನಮ್ಮ ಮನೋವಾಕ್ಕಾಯಬುದ್ಧಿಗಳ ವ್ಯಾಪಾರಗಳೊಂದೊಂದರಲ್ಲೂ ಹಾಸುಹೊಕ್ಕಾಗಿ ಸೇರಿಕೊಂಡಿರುವುದನ್ನು ವಿಮರ್ಶಿಸುವಾಗ ಮೋಕ್ಷಫಲಕ್ಕೆ ಇವು ಒಂದೊಂದರಲ್ಲೂ ಅಡಗಿ ಕುಳಿತಿರುವ ಸಾತ್ತ್ವಿಕ ಭಾಗವನ್ನು ಮೊದಲು ಅರಿತು ಅನಂತರ ಅವುಗಳನ್ನು ನಮ್ಮ ಸಾಧನೆಯಲ್ಲಿ ಅಳವಡಿಸಿಕೊಳ್ಳಬೇಕೆಂಬುದನ್ನು ಯೋಚಿಸುವಾಗ

ದೈವೀಹ್ಯೇಷಾ ಗುಣಮಯೀ
ಮಮ ಮಾಯಾ ದುರತ್ಯಯಾ
ಮಾಮೇವಯೇ ಪ್ರಪದ್ಯನ್ತೇ
ಮಾಯಾಮೇತಾಂ ತರಂತಿ ತೇ

(ಭ. ಗೀ 7–14) ಎಂದರೆ– ಭಗವನ್ಮಾಯೆಯೆನಿಸಿದ ಈ ತ್ರಿಗುಣಗಳ ಹಿಡಿತದಿಂದ ಈ ಬ್ರಹ್ಮಾಂಡದಲ್ಲಿರುವವರ್ಯಾರೂ ತಮ್ಮ ಸ್ವಪ್ರಯತ್ನದಿಂದ ತಪ್ಪಿಸಿಕೊಳ್ಳಲಾರರು. ಯಾರು ನನ್ನಲ್ಲೇ ಶರಣಾಗತಿಯನ್ನು ಆದಕ್ಕಾಗಿ ಅನುಷ್ಠಿವರೋ ಅವರು ನನ್ನ ಅನುಗ್ರಹದಿಂದ ಭಗವನ್ಮಾಯೆಯನ್ನು ದಾಟುವರು ಎಂಬ ಶ್ರೀಕೃಷ್ಣನ ಉಪದೇಶದ ಮಹತ್ತ್ವವು ಅರಿವಾಗುವುದು ರಾಜಸ ತಾಮಸ ಗುಣ ಪ್ರಚುರವಾದ ಈ ಕಲಿಯುಗದಲ್ಲಿ ಅಜ್ಞಾನ ಅಶಕ್ತಿಗಳಿಂದ ಕೂಡಿದ ನಮ್ಮಿಂದ ಇದು ದುಸ್ಸಾಧ್ಯವೆಂದೇ ತೋರುವುದು ಸಹಜ.

ಈ ವಿಧವಾದ ಭಯವೂ ಅದರಿಂದ ದುಃಖವೂ ಅರ್ಜುನನಿಗೂ ಉಂಟಾಗಿರಬೇಕೆಂದು ತೋರುತ್ತದೆ. ನಮ್ಮ ಪ್ರಯತ್ನದಲ್ಲಿ ಭಗವದನುಗ್ರಹವು ದೊರೆತು ಭಗವಂತನೇ ನೇರವಾಗಿ ಸಹಕರಿಸಿ ನಮ್ಮನ್ನು ಉದ್ಧರಿಸಬೇಕು. ಆದ್ದರಿಂದಲೇ ಈ ಗೀತಾ ಶಾಸ್ತ್ರದ ಚರಮಶ್ಲೋಕವಾದ

ಸರ್ವ ಧರ್ಮಾನ್ಪರಿತ್ಯಜ್ಯ
ಮಾಮೇಕಂ ಶರಣಂವ್ರಜ ।
ಅಹಂತ್ವಾ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾಶುಚಃ ॥

(ಭ. ಗೀ 18–66) ಎಂಬ ಭಗವಂತನ ಅಭಯ ಪ್ರದಾನ ಶ್ಲೋಕವು ಅನುಗ್ರಹಿಸಲ್ಪಟ್ಟಿರುವುದೆಂದು ಊಹಿಸುವುದಕ್ಕೆ ಅವಕಾಶವಿದೆ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪ್ರಾ 8–30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ಮ. 1–00 | ಸಂ 6–00 |
| | ರಾ 7–00 | ರಾ 8–45 |
| ಏಕಾಂತಸೇವೆ. | | ರಾ 9–00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ;

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | |
|---|---|---|
| 1. | ದೋಸೆ ಕಾಲುಸೇರು | 35–00 |
| 2. | ದಧ್ಯೋದನ | 40–00 |
| 3. | ಪುಳಿಯೋಗರೆ | 50–00 |
| 4. | ಪೊಂಗಲು | 55–00 |
| 5. | ಸಕ್ಕರೆಪೊಂಗಲ್ | 55–00 |
| 6. | ಶಾಕರ ಭಾತ್ | 85–00 |
| 7. | ಕೇಸರೀ ಭಾತ್ | 90–00 |
| 8. | ಸೀರ | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

(6ನೇ ಪುಟದಿಂದ)

ಈ ಕೊಳದ ಉತ್ತರದ ದಡದಲ್ಲಿ ಅನೇಕ ಮಠಗಳು, ದೇವಸ್ಥಾನಗಳು, ಧರ್ಮಶಾಲೆಗಳು ಇವೆ. ಗೀತಾ ದೇವಾಲಯ, ವ್ಯಾಸಗೌಡೀಯ ಮಠ, ಗೀತಾಭವನ್ ಮುಖ್ಯವಾದವು. ಇವುಗಳಲ್ಲಿ ಕೆಲವು ಇತ್ತೀಚೆಗೆ ನಿರ್ಮಾಣವಾದವುಗಳಾದರೂ, ಆಯಾ ದೇವಾಲಯಗಳ ಪ್ರಾಚೀನ ನಿವೇಶನಗಳ ಮೇಲೆಯೇ ನಿರ್ಮಿಸಲಾಗಿದೆ ಎಂದು ಹೇಳಲಾಗುತ್ತದೆ.

ಈ ಕೊಳವು ಸಿಖ್ಖರಿಗೂ ಪವಿತ್ರವಾದುದಾಗಿದೆ. ಇದರ ನೈಋತ್ಯ ಮೂಲೆಯಲ್ಲಿ ಅವರ ಪವಿತ್ರವಾದ ಸ್ಥಳವೊಂದಿದೆ.

ಸನ್ನಿಹಿತ ಕೊಳವು ಕುರುಕ್ಷೇತ್ರ ಕೊಳಕ್ಕಿಂತ ಚಿಕ್ಕದಾದರೂ ಅನೇಕ ಯಾತ್ರಾರ್ಥಿಗಳ ಸೂರ್ಯಗ್ರಹಣದ ದಿನದಂದು ಭೇಟಿಮಾಡುವ ಸ್ಥಳವಾಗಿದೆ. ಈ ಸರೋವರದ ದಡಗಳಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಲಾಗಿದೆ.

ಸ್ಥಾಣೇಶ್ವರ ಶಿವ ಎನ್ನುವ ದೇವಾಲಯವೊಂದರ ಎದುರುಗಡೆ ಇರುವ ಕೊಳವನ್ನೂ ಪವಿತ್ರವೆಂದು ಪರಿಗಣಿಸಲಾಗುತ್ತಿದೆ.

ಅಶ್ವತ್ಥ ವೃಕ್ಷವೊಂದರ ನೆರಳಿನಲ್ಲಿ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯನ್ನು ಉಪದೇಶಿಸಿದನೆಂದು ಹೇಳಲಾಗುತ್ತದೆ. ಇದರ ಬಳಿಯಲ್ಲಿ ಜ್ಯೋತೀಶ್ವರ ಕೊಳವಿದೆ ಆದರಿಂದ ಇದನ್ನು ಪವಿತ್ರ ತೀರ್ಥವೆಂದು ನಂಬಲಾಗಿದೆ.

ಹಿಂದೂಧರ್ಮ ಪ್ರಚಾರಕರ ಮಂಡಲಿಯೊಂದು ದೇವಸ್ಥಾನವೊಂದನ್ನು ನಿರ್ಮಿಸಿ, ಅದರ ಬಳಿಯಲ್ಲಿ ಕೃಷ್ಣಾರ್ಜುನರು ರಥದಲ್ಲಿ ಕುಳಿತಿರುವ ಸುಂದರ ಅಮೃತ ವಿಗ್ರಹಗಳನ್ನು ಸ್ಥಾಪಿಸಿದ್ದಾರೆ.

ಚಂದ್ರ–ಗುಪ್ತ, ಭದ್ರ–ಕಾಳಿ ದೇವಾಲಯ, ಬಾಣ್–ಗಂಗಾ, ನರ್–ಕತಾರಿ, ಕುಬೇರ–ತೀರ್ಥ, ವಿಷ್ಣು ಪಾದ – ಇತ್ಯಾದಿ ಇಲ್ಲಿನ ಇತರೇ ಪವಿತ್ರ ಸ್ಥಳಗಳಾಗಿವೆ.

ಋಷಿ ಮಾರ್ಕಂಡೇಯ, ವಶಿಷ್ಠ, ಪರಾಶರ, ಬಿಮಲ ಮೊದಲಾದವರ ಆಶ್ರಮಗಳೆಂದು ಕರೆಯಲ್ಪಡುವ ಪವಿತ್ರ ಸ್ಥಳಗಳನ್ನೂ ತೋರಿಸಲಾಗುತ್ತದೆ.

ಇಲ್ಲಿನ ನೆರೆಹೊರೆಯ ಪ್ರದೇಶಗಳಾದ ಪೆಹೋವ, ಕೈಥಲ್ ಇತ್ಯಾದಿಗಳೂ ಕೂಡ ಹಿಂದೂಗಳಿಗೆ ಪವಿತ್ರವಾದ ಅನೇಕ ಸ್ಥಳಗಳನ್ನು ಹೊಂದಿದ್ದು, ಕುರುಕ್ಷೇತ್ರವನ್ನು ಸಂದರ್ಶಿಸುವ ಯಾತ್ರಾರ್ಥಿಗಳು ಈ ಪ್ರದೇಶಗಳನ್ನೂ ಸಂದರ್ಶಿಸುವರು.

ಇತ್ತೀಚೆಗೆ ಬಿರ್ಲಾ ಸಂಸ್ಥೆಯಿಂದ ನಿರ್ಮಾಣವಾಗಿರುವ ಥಾನೇಶ್ವರದಲ್ಲಿರುವ ಶ್ರೀ ಭಗವದ್ಗೀತಾ ದೇವಾಲಯವು ಉತ್ತಮ ಮಟ್ಟದ ವಾಸ್ತುಶಿಲ್ಪವನ್ನು ಪ್ರದರ್ಶಿಸುತ್ತದೆ.

ಪ್ರವಾಸಿ ಸಂಸ್ಥೆಗಳ ಮುಖಾಂತರ ಇಲ್ಲವೆ ವೈಯಕ್ತಿಕವಾಗಿಯೂ ಈ ಸ್ಥಳಕ್ಕೆ ಭೇಟಿ ಮಾಡಬಹುದು. ಹಾಗೆ ಮಾಡುವಾಗ ರೈಲ್ವೇ ಸ್ಟೇಷನ್‌ನಲ್ಲಿ ಇಳಿದ ಮೇಲೆ ಹೊರಗಡೆಯಲ್ಲಿನ ಟಾಂಗಾದವರೊಂದಿಗೆ ಮಾತನಾಡಿ, ಒಟ್ಟಾರೆ ನಿಗದಿ ಮಾಡಿಕೊಂಡರೆ, ಈ ಪ್ರದೇಶದ ಸ್ಥಳಗಳನ್ನೆಲ್ಲ ತೋರಿಸಿಕೊಂಡು ಬರುವರು. ಇದರಲ್ಲಿ ಮೋಸವೇನೂ ಇಲ್ಲ. ಬೆಳಗ್ಗೆ ಹೊರಟರೆ ಸಾಯಂಕಾಲಕ್ಕೆ ಸ್ಟೇಷನ್‌ಗೆ ಹಿಂತಿರುಗಬಹುದು ಇದು ತುಂಬಾ ಅನುಕೂಲವೂ ಹೌದು.

ಸಂಪ್ರದಾಯ, ಪರಂಪರೆ ಹಾಗೂ ಐತಿಹಾಸಿಕತೆಗಳ ಮುಖಾಂತರ ಪವಿತ್ರಗೊಳಿಸಲ್ಪಟ್ಟಿರುವ, ಹಿಂದೂ ಮುಸ್ಲಿಂ ಸಿಖ್ ಸಂಸ್ಥೆಗಳ ಮುಖಾಂತರ ವರ್ಷ ಪೂರ್ತಿ ನಡೆಸಲ್ಪಡುವ ಉತ್ಸವಗಳಿಂದ ಕುರುಕ್ಷೇತ್ರವು ಇನ್ನೂ ಹೆಚ್ಚು ಆಕರ್ಷಕ ಅಭಿವೃದ್ಧಿ ಕಾರ್ಯಗಳನ್ನು, ವ್ಯವಸ್ಥೆಗಳನ್ನು ಹೊಂದಬೇಕಾದ ಅವಶ್ಯಕತೆ ಇದೆ. ಅಂತೆಯೇ ಹೆಚ್ಚಿನ ಉತ್ಖನನ ಕಾರ್ಯಗಳೂ ನಡೆಯಬೇಕಾಗಿರುವುದು ಅನಿವಾರ್ಯವಾಗಿದೆ.

ಈ ಪ್ರದೇಶದ ಬಗ್ಗೆ ಬಹಳಷ್ಟು ಪೌರಾಣಿಕ ಸಾಹಿತ್ಯವಿದ್ದರೂ ವೈಜ್ಞಾನಿಕವಾಗಿ ಸಂಶೋಧಿಸಲ್ಪಟ್ಟ ವಿಷಯ ಸಂಗ್ರಹಣೆ ಆಗಿಲ್ಲ. ಈ ನಿಟ್ಟಿನಲ್ಲಿ ಯಾವ ಪ್ರಯತ್ನವೂ ಸರಿಯಾದ ರೀತಿಯಲ್ಲಿ ನಡೆಯದೆ ಇರುವುದು ಶೋಚನೀಯ.

*

## ವೃಕ್ಷೋ ರಕ್ಷತಿ ರಕ್ಷಿತಃ

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ

ಮರೆಯದಿರಿ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ ಪೋಷಣೆಗಳೂ ಉಂಟು.

# ವಾರ್ತಾವಳಿ

## ವನೌಷಧಿ ವಿತರಣಾಯಜ್ಞ

ಆಂಧ್ರಪ್ರದೇಶದ ಸರ್ಕಾರದ ಆಯುರ್ವೇದ ಸಲಹೆಗಾರರೂ, ಖ್ಯಾತ ಆಯುರ್ವೇದ ಪಂಡಿತರೂ ಆದ ಡಾ॥ ಬಾಲರಾಜ ಮಹರ್ಷಿ ಅವರು 19, 20, ನವಂಬರ್ 1988 ರಂದು ತಿರುಪತಿಯ ಎಸ್. ವಿ. ಪ್ರೌಢಶಾಲಾವರಣದಲ್ಲಿ ತಿ. ತಿ. ದೇ. ಗಳ ಪೌರ ಸಂಬಂಧ ಶಾಖೆ ಹಾಗೂ ತಿರುಪತಿಯ ನಾಗರಿಕ ಸಂಕ್ಷೇಮ ಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ಆಯುರ್ವೇದ ಔಷಧಗಳ ವಿತರಣೆಯ ವನೌಷಧಿ ವಿತರಣಾಯಜ್ಞವನ್ನು ನೆರವೇರಿಸಿಕೊಟ್ಟರು

ತತ್ಸಂಬಂಧದಲ್ಲಿ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ಮಾತನಾಡುತ್ತ ಆಂಧ್ರಪ್ರದೇಶ ಅರಣ್ಯ ಇಲಾಖಾ ಮಂತ್ರಿ ಶ್ರೀ ಗಾಲಿ ಮುದ್ದುಕೃಷ್ಣಮನಾಯುಡು ಅವರು ಮಾತನಾಡುತ್ತ, ಔಷಧ ಮೂಲಿಕೆಗಳನ್ನು ವ್ಯಾಪಕವಾಗಿ ಬೆಳೆಸಲು ತೀರ್ಮಾನಿಸಿರುವುದಾಗಿ ತಿಳಿಸಿದರು. ಭಾರತೀಯ ವೈದ್ಯದ ಮಾಜೀ ಮಂತ್ರಿ ಶ್ರೀ ಎನ್. ಚಂದ್ರ ಬಾಬು ನಾಯುಡು ಅವರು ಮಾತನಾಡುತ್ತ–ತಿರುಮಲೆ ಪರಿಸರ ಪ್ರಾಂತ್ಯದಲ್ಲಿ ಔಷಧೀ ಸಸ್ಯಗಳನ್ನು ಬೆಳೆಸಿ, ತಿ. ತಿ ದೇ. ಗಳು ಇಲ್ಲಿಯೇ ಔಷಧ ತಯಾರಿಕೆಯ ಕೇಂದ್ರವನ್ನು ಆರಂಭಿಸಬೇಕಾದ ಅಗತ್ಯವಿದೆ–ಎಂದು ವಿವರಿಸಿದರು. ಶ್ರೀಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯ ಉಪಕುಲಪತಿ ಡಾ॥ ಕೆ. ರಾಜ್ಯಲಕ್ಷ್ಮೀ ಅವರು ಔಷಧಿ ವಿತರಣ ಯಜ್ಞ ಕಾರ್ಯಕ್ರಮಕ್ಕೆ ಮೀಸಲಿರಿಸದೆ ವಿತರಣೆಯನ್ನು ನಿರಂತರಗೊಳಿಸಬೇಕು ಎಂದು ಕರೆ ನೀಡಿದರು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಆಯುರ್ವೇದ ಫಾರ್ಮಸಿಗಳು ಹೆಚ್ಚು ಹೆಚ್ಚು ನಿರ್ಮಾಣವಾಗಬೇಕಿದೆ ಎಂದು ತಿಳಿಸಿದರು.

ಆಯುರ್ವೇದ ವಿಜ್ಞಾನಿ ಡಾ॥ ಬಾಲರಾಜ ಮಹರ್ಷಿ ಅವರು ಮಾತನಾಡುತ್ತ, ಆಯುರ್ವೇದ ವಿಜ್ಞಾನ ವಿದೇಶಗಳಲ್ಲೂ ಪ್ರಾಮುಖ್ಯತೆಯನ್ನು ಪಡೆಯುತ್ತಿದೆ ಎಂದು ತಿಳಿಸಿ, ಇಂತಹ ಔಷಧಿ ವಿತರಣಾ ಕೇಂದ್ರಗಳು ಹೆಚ್ಚು ಹೆಚ್ಚಾಗಿ ಕೆಲಸ ಮಾಡಬೇಕೆಂದೂ, ಅದಕ್ಕಾಗಿ ತಾವು 30,000 ಮಂದಿಗೆ ತರಪೇತು ನೀಡಲು ಬಯಸಿರುವುದಾಗಿ ತಿಳಿಸಿದರು. ಹದಿನೈದು ದಿನಗಳ ಶಿಕ್ಷಣ ಶಿಬಿರದಲ್ಲಿ ಸುಮಾರು 60 ಸಾಮಾನ್ಯ ರೋಗಗಳಿಗೆ ಚಿಕಿತ್ಸೆಯನ್ನು ಹೇಳಿಕೊಟ್ಟು ಮೂಲಿಕೆಗಳ ಖಚಿತ ವಿವರಗಳನ್ನೂ, ಅವುಗಳ ಬಳಕೆಯ ಪ್ರಮಾಣಗಳನ್ನೂ ತಿಳಿಸಿಕೊಡುವುದಾಗಿ ತಿಳಿಸಿದರು

ನಾಗರಿಕ ಸಂಕ್ಷೇಮ ಸಂಸ್ಥೆಯ ಅಧ್ಯಕ್ಷರು ಕಾರ್ಯದರ್ಶಿ ಶ್ರೀ ರಂಗಪ್ಪ ಹಾಗೂ ಶ್ರೀ ಶ್ರೀನಿವಾಸಮೂರ್ತಿ ಮತ್ತು ಜಿಲ್ಲಾ ಪರಿಷತ್ ಅಧ್ಯಕ್ಷ ಶ್ರೀ ಜಿ. ವಿ. ಶ್ರೀನಾಥ ರೆಡ್ಡಿ ಅವರುಗಳೂ ಮಾತನಾಡಿದರು (ಚಿತ್ರಗಳನ್ನು ಒಳ ರಕ್ಷಾಪುಟ 2 ರಲ್ಲಿ ಕಾಣಬಹುದು.)

## ತಿರುಮಲೆಯ ಬಸ್ ಟಿಕೆಟ್‌ದರ ಏರಿಕೆ

ತಿರುಪತಿಯಿಂದ ತಿರುಮಲೆಗೆ ಹೋಗುವ ಬಸ್‌ಗಳಲ್ಲಿನ ಟಿಕೆಟ್ ದರ ಆಂಧ್ರಪ್ರದೇಶ ರಸ್ತೆ ಸಾರಿಗೆ ಸಂಸ್ಥೆಯ ಟಿಕೆಟ್ ದರಗಳ ಏರುವಿಕೆಯಿಂದಾಗಿ ಏರಿದೆ. ಇದರಂತೆ ಹಿಂದೆ ರೂ 4–25 ಇದ್ದ ಟಿಕೆಟ್ ದರ ಈಗ ರೂ. 4–75 ಆಗಿದೆ.

## ಮಂಗಳಗಿರಿಯಲ್ಲಿ ತಿ. ತಿ. ದೇ. ಕಲ್ಯಾಣಮಂಟಪ

ಆಂಧ್ರಪ್ರದೇಶದ ಮಂಗಳಗಿರಿಯಲ್ಲಿ ಇತ್ತೀಚೆಗೆ ತಿ. ತಿ. ದೇ. ಕಲ್ಯಾಣಮಂಟಪವನ್ನು ಉದ್ಘಾಟಿಸಲಾಯಿತು. ಆಂಧ್ರ ಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಮಂಗಳಗಿರಿಯ ಪಾನಕಾಲ ನರಸಿಂಹಸ್ವಾಮಿ ದೇವಾಲಯದ ಸಮೀಪದ ಈ ಕಲ್ಯಾಣಮಂಟಪವನ್ನು ಉದ್ಘಾಟಿಸಿದರು. ಆಂಧ್ರಪ್ರದೇಶ ಮಾಜಿ ಮಂತ್ರಿ ಶ್ರೀ ಎಂ. ಎಸ್. ಕೋಟೀಶ್ವರ ರಾವ್, ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಮೊದಲಾದವರು ಭಾಗವಹಿಸಿದ್ದರು.

## ತಿರುಮಲೆಯಲ್ಲಿ ಮಾರಿಷಸ್ ಗವರ್ನರ್ ಜನರಲ್

ಮಾರಿಷಸ್ ದೇಶದ ಗವರ್ನರ್ ಜನರಲ್ ಶ್ರೀ ವೀರಾಸ್ವಾಮಿ ರಿಂಗಡೂ ಅವರು ನವಂಬರ್ 22 ರಂದು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಶ್ರೀ ರಿಂಗಡೂ ಅವರು ತಾವು ತಿರುಮಲೆಯನ್ನು ಸಂದರ್ಶಿಸುತ್ತಿರುವುದು ಇದು ಮೂರನೆಯ ಬಾರಿಯೆಂದೂ ಪ್ರತಿಬಾರಿಯೂ ಹೊಸ ಅಭಿವೃದ್ಧಿ ಕಾರಕ ಪರಿವರ್ತನೆಗಳನ್ನು ಗಮನಿಸುತ್ತ ಸಂತಸ ಹೊಂದುತ್ತಿರುವುದಾಗಿಯೂ ತಿಳಿಸುತ್ತ ದೇವರು ಸುಂದರವಾದ ಮಾರಿಷಸ್ ದ್ವೀಪಗಳನ್ನುಂಟು ಮಾಡಿದಂತೆಯೇ ಸುಂದರವಾದ ತಿರುಮಲೆಯನ್ನೂ ಸೃಷ್ಟಿಸಿದ್ದಾನೆ ಎಂದು ತಿಳಿಸಿದರು.

ತಿರುಮಲೆಯಲ್ಲಿ ಗವರ್ನರ್ ಜನರಲ್ ದಂಪತಿಗಳನ್ನು ಇಸ್ತಿಕಫಾಲ್‌ದೊಡನೆ ದೇವಾಲಯ ಮರ್ಯಾದೆಗಳಂತೆ ಸ್ವಾಗತಿಸಲಾಯಿತು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಮೊದಲಾದವರು ಶ್ರೀ ರಿಂಗಡೂ ದಂಪತಿಗಳನ್ನು ಸ್ವಾಗತಿಸಿದರು ಮಿರಾಸಿ ಅರ್ಚಕ ಶ್ರೀ ಶ್ರೀನಿವಾಸ ಭಟ್ಟಾಚಾರ್ಯರು ಅವರಿಗೆ ಶ್ರೀನಿವಾಸ ವೈಭವವನ್ನು ವಿವರಿಸಿದರು. ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಶ್ರೀಯುತರಿಗೆ ದೇವಾಲಯವನ್ನು ತೋರಿಸುತ್ತ ಅನ್ನದಾನಯೋಜನೆಯನ್ನು ವಿವರಿಸಿದರು.

ಶ್ರೀ ವೀರಾಸ್ವಾಮಿ ರಿಂಗಡೂ ಅವರಿಗೆ ಸ್ವಾಮಿ ಪ್ರಸಾದಗಳನ್ನೂ ಶೇಷವಸ್ತ್ರವನ್ನೂ ನೀಡಿ ಸನ್ಮಾನಿಸಲಾಯಿತು

ಮಾರಿಷಸ್‌ನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ನಿರ್ಮಾಣವಾಗುತ್ತಿರುವುದರ ಬಗ್ಗೆ ಮಾತನಾಡುತ್ತ ಗವರ್ನರ್ ಜನರಲ್ ಶ್ರೀ ರಿಂಗಡೂ ಅವರು ಈ ನಿರ್ಮಾಣದಲ್ಲಿ ತಿ. ತಿ. ದೇ. ಗಳ ನೆರವನ್ನು ಸ್ಮರಿಸುತ್ತ, ತಿ. ತಿ. ದೇ ಗಳಿಂದಲೇ ಇಲ್ಲಿನ ವಿಗ್ರಹಗಳ ಪ್ರತಿಷ್ಠಾಪನೆ ನಡೆಯುವುದೆಂದೂ ಮುಂದಿನ ವರ್ಷದಲ್ಲಿ ಈ ದೇವಾಲಯ ನಿರ್ಮಾಣ ಪೂರ್ಣಗೊಳ್ಳುವುದೆಂದೂ ತಿಳಿಸಿದರು. (ಚಿತ್ರಗಳನ್ನು ಒಳರಕ್ಷಾ ಪತ್ರ–1 ರಲ್ಲಿ ಕಾಣಬಹುದು)

## ಪುಷ್ಪಯಾಗ

ಶ್ರೀ ವೆಂಕಟೇಶ್ವರಸ್ವಾಮಿ ಪುಷ್ಪಯಾಗ ನವಂಬರ್ 16 ರಂದು ತಿರುಮಲೆಯಲ್ಲಿ ಯಶಸ್ವಿಯಾಗಿ ನಡೆಯಿತು.

ಲಲಿತ ಸುಂದರ ಸುಗಂಧ ಭೂಯಿಷ್ಠವಾದ 1 75 ಗುಂಪುಗಳಲ್ಲಿನ ಹೂವುಗಳಿಂದ ಶ್ರೀದೇವೀ ಭೂದೇವೀ ಸಮೇತ ಶ್ರೀನಿವಾಸನಿಗೆ ಪುಷ್ಪಾಭಿಷೇಕ ನಡೆಯಿತು.

ಪ್ರತಿವರ್ಷ ಕಾರ್ತೀಕ ಮಾಸದ ಶ್ರವಣ ನಕ್ಷತ್ರದ ದಿನ ಸ್ವಾಮಿಗೆ ನಡೆಸಲಾಗುವ ಪುಷ್ಪ ಕೈಂಕರ್ಯದ ಈ ಸೇವೆಯನ್ನು 1980 ರಲ್ಲಿ ಪ್ರವೇಶಗೊಳಿಸಲಾಯಿತು. ಈ ಬಾರಿ ರೂ 3500–00 ಗಳ ಶುಲ್ಕ ಸಲ್ಲಿಸಿದ 46 ಮಂದಿ ಗೃಹಸ್ಥರು ಈ ಯಾಗದಲ್ಲಿ ಪಾಲುಗೊಂಡರು. ಬೆಳಗ್ಗೆ 7 ಗಂಟೆಗೆ ಆರಂಭವಾಗಿ ಸಂಜೆ 5 ಗಂಟೆಯವರೆಗೆ ನಡೆದ ಪುಷ್ಪಯಾಗದಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಭದ್ರತಾಧಿಕಾರಿ ಶ್ರೀ ಎಸ್.

# ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ ಎ. ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೇ ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗೆ ಅನ್ನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವದಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಬಲಶಕ್ತಿಯ ಜೀವಸತ್ತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು.)**

ಕೆ. ಜಯಚಂದ್ರ ಮೊದಲಾದ ಅಧಿಕಾರಿಗಳೂ ಬೋರ್ಡ್ ಸದಸ್ಯರೂ ಭಾಗವಹಿಸಿದ್ದರು.

ಸಂಜೆ 7 ಗಂಟೆಗೆ ಸ್ವಾಮಿಯ ಊಂಜಲ್‌ಸೇವೆ ನಡೆದು ನಂತರ ಉಭಯನಾಚ್ಚಿಯಾರೊಡನೆ ಸ್ವಾಮಿ ರಥವೀದಿಯಲ್ಲಿ ಮೆರವಣಿಗೆ ಹೊರಟು ಭಕ್ತ ಜನವನ್ನು ಆನಂದಪರವಶಗೊಳಿಸಿದರು.

ಪುಷ್ಪಯಾಗದ ವಿವಿಧ ಹೂವಿನ ಅಲಂಕಾರ, ಹೂಗಳ ನಿರ್ವಹಣೆ ತಿ. ತಿ. ದೇ. ಉಪವನ ವಿಭಾಗದ ನಿರ್ದೇಶಕರಾದ ಶ್ರೀ ತಮ್ಮಣ್ಣ ಅವರ ನೇತೃತ್ವದಲ್ಲಿ ನಡೆಯಿತು.

ಸಾಂಸ್ಕೃತಿಕ ಸಮಾಚಾರ

## ಶ್ರೀಮತಿ ಶಿಂಗಾರಮ್ಮನವರಿಗೆ ವಿದ್ಯಾಸಾಗರ ಪ್ರಶಸ್ತಿ

ಮಂಡ್ಯದ ಶ್ರೀಮತಿ ಎಂ. ಎಸ್. ಶಿಂಗಾರಮ್ಮ (ಶ್ರೀದೇವಿ) ಅವರಿಗೆ ಭಾಗಲ್ಪುರದ ವಿಕ್ರಮಶಿಲಾ ವಿದ್ಯಾಪೀಠವು ಅವರ ಸಾಹಿತ್ಯ ಸೇವೆಗಾಗಿ ವಿದ್ಯಾಸಾಗರ (ಡಿ. ಲಿಟ್) ಪ್ರಶಸ್ತಿಯನ್ನು ನೀಡಿದೆ. ಶ್ರೀಮತಿಯವರು ಅಣ್ಣಂಗರಾಚಾರ್ಯರ ಬಹುಕೃತಿಗಳನ್ನು ಕನ್ನಡ, ಹಿಂದಿಗಳಿಗೆ ಭಾಷಾಂತರಿಸಿದ್ದಾರೆ. ಕನ್ನಡದಲ್ಲಿ ಹಲವಾರು ಶ್ರೀವೈಷ್ಣವ ಧರ್ಮಗ್ರಂಥಗಳನ್ನು ರಚಿಸಿದ್ದಾರೆ.

## ಕರ್ನಾಟಕ ಸಾಹಿತ್ಯ ಅಕಾದಮಿ ಬಹುಮಾನಗಳು

ಕರ್ನಾಟಕ ಸಾಹಿತ್ಯ ಅಕಾದಮಿಯು 17 ಪ್ರಕಾರಗಳಲ್ಲಿ ಅತ್ಯುತ್ತಮ ಪುಸ್ತಕಗಳಿಗೆ ಬಹುಮಾನ ನೀಡುವುದಿದ್ದು, ಈ ವರ್ಷದ ಜೀವನ ಚರಿತ್ರೆ ವಿಭಾಗದಲ್ಲಿ ಸದ್ಗುರು ತ್ಯಾಗರಾಜರು ಕೃತಿಗೆ ಬಹುಮಾನ (ರೂ. 3000) ನೀಡಲಾಗಿದೆ. ಈ ಪುಸ್ತಕದ ಲೇಖಕರು—ಡಾ॥ ವಿ. ಎಸ್. ಸಂಪತ್ಕುಮಾರಾಚಾರ್ಯ ಅವರು. ಶ್ರೀಯುತರು ತಮ್ಮ ಕರ್ನಾಟಕ ಸಂಗೀತ ಸುಧಾ, ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ (ಎರಡು ಸಂಪುಟ) ಶ್ರೀಕೃಷ್ಣದೇವರಾಯನ ದಿನಚರಿ (ಸಂಪಾದಿತಕೃತಿ) ಗಳಿಂದ ಪ್ರಸಿದ್ಧರು. ಸದ್ಗುರು ತ್ಯಾಗರಾಜರು ಕೃತಿ ತಿ. ತಿ. ದೇ. ಗಳ ಆರ್ಥಿಕ ನೆರವಿನಿಂದ ಪ್ರಕಟವಾದ ಪುಸ್ತಕ ಎಂಬುದನ್ನು ನೆನೆಯಬಹುದು.

ವರ್ಷದ ಶ್ರೇಷ್ಠ ಕೃತಿಗಳೆಂದು ಸೃಜನಶೀಲ ಪ್ರಕಾರದಲ್ಲಿ ತ. ಸು. ಶಾಮರಾಯರ 'ಮೂರು ತಲೆಮಾರು' ಕೃತಿಗೆ ಹಾಗೂ ಸೃಜನೇತರ ಪ್ರಕಾರದಲ್ಲಿ ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರಿಯವರ 'ಚಿತ್ರಕಾವ್ಯ' ಕೃತಿಗೂ ನೀಡಲಾಗಿದ್ದು ಈ ಲೇಖಕರು 5000 ರೂಗಳ ಬಹುಮಾನವನ್ನು ಪಡೆಯುವರು.

# ಶ್ರೀ ವೇಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುತ್ತದೆ.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೇಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:
**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ. ತಿರುಪತಿ.**

**ಮುಂದಿನ ಸಂಚಿಕೆಯಲ್ಲಿ .... .... ..**

**ಸಪ್ತಗಿರಿ — ಜನವರಿ 1989**

**ಶ್ರೀ ಮುತ್ತುಸ್ವಾಮಿ ದೀಕ್ಷಿತರು**
–ಪ್ರೇಮಲತಾ ಕೆ. ಮೂರ್ತಿ

**ಪುರಂದರರು–ಏಕಾದಶೀವ್ರತ**
–ಹನುಮಂತಾಚಾರ್ಯ ಮಣ್ಣೂರ್

**ಅನಂತಶಯನ**
–ಸಿ. ಗೋವಿಂದಾಚಾರ್ಯ

**ಬಟಿಕಾ**
–ರಘುಸುತ

**ಪ್ರಾಚೀನ ಭಾರತದ ಚಿಕಿತ್ಸಾಲಯಗಳು**
–ಬಿ. ನ. ಗುಂಡೂರಾವ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ –

ಸಂಪಾದಕರು
ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

## ಜನವರಿ 1989

| | | |
|---|---|---|
| 5. | ಗುರುವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷ ತಿರುನಕ್ಷತ್ರ. |
| 7. | ಶನಿವಾರ | ಆಂಡಾಳ್ ನೀರಾಟ್ಟೋತ್ಸವಂ ಆರಂಭ. |
| 13. | ಶುಕ್ರವಾರ | ಭೋಗಿ ಹಬ್ಬ. |
| 14. | ಶನಿವಾರ | ಮಕರಸಂಕ್ರಾಂತಿ |
| 15. | ಭಾನುವಾರ | ಕನೂಹಬ್ಬ, ಗೋದಾ ಪರಿಣಯೋತ್ಸವ. |
| 24. | ಮಂಗಳವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ |
| 26. | ಗುರುವಾರ | ಭಾರತ ಗಣತಂತ್ರದಿನ. |
| 27. | ಶುಕ್ರವಾರ | ಕೂರತ್ತಾಳ್ವಾರ್ ವರ್ಷ ತಿರುನಕ್ಷತ್ರ |

# ಚಂದಾದಾರರಲ್ಲಿ ಒಂ
# ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾ
ಜನವರಿ 1989 ಕ್ಕೆ ಚಂದಾ ಅವಧಿ
ಯುವ ಚಂದಾ ಕ್ರಮಸಂಖ್ಯೆಗಳನ್ನು ಕೆ
ಲಾಗಿದೆ. ಚಂದಾದಾರರು ದಯವಿಟ್ಟು
ಮುಂದಿನ ಚಂದಾ ಹಣವನ್ನು ಕೂಡಲೇ
ಮಾಡಬೇಕೆಂದು ವಿನಂತಿ.

3, 11, 12, 30, 31, 32, 33
51, 68, 74 75, 76, 78, 80, 10
128, 130, 132, 136, 141, 15
213, 216, 218, 220, 305, 30
320, 321, 322, 223, 325, 32
403, 412, 541, 587 to 890,
600, 604, 609, 613, 623, 63
650, 651, 662, 664, 665, 66
676, 681, 682, 686, 692, 70
709, 722, 733, 734, 1172,
1177, 1184, 1188, 1192, 1196
1204, 1206, 1209, 1213, 1214
1229, 1230, 1232, 1233, 1237
1240, 1241, 1244, 1247,
1255, 1258, 1261, 1265, 1267
1269, 1272, 1275, 1279, 1280
1297, 1298, 1605, 1823, 1846
to 1901, 1903 to 1908, 1
1920, 1922 to 1925, 1927 t
1937 to 1944, 1946 to 1954
1959.

ಚಂದಾ ಹಣವನ್ನು ಕಳುಹಿಸುವ
ದಾರರು ತಮ್ಮ ಚಂದಾ ಸಂಖ್ಯೆಯನ
ಸ್ಪಷ್ಟವಾಗಿ ಬರೆಯಬೇಕು. ವಿಳಾಸವ
ಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ.ವಿ
ಲಾವಣೆಯನ್ನು ತಿಳಿಸುವಾಗ ಚಂದ
ಸಂಖ್ಯೆಯನ್ನೂ, ಹೊಸವಿಳಾಸವನ
ವಾಗಿ ಬರೆಯಬೇಕೆಂದು ವಿನಂತಿಸಲಾ

**ಸಂಪಾದಕರು, ಸ**
**ತಿ. ತಿ. ದೇ. ತಿ**

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.



*The photos taken during visit of Sri Veeraswami Ringadu the Governor General of Mauritius to Tirumala.*













